# ಸಿದ್ಧಗಂಗಾ

ಂಪುಟ-೨೬. ಸಂಚಿಕೆ-೪ ಏಪ್ರಿಲ್-೧೯೯೦

ಔಪಚಾರಿಕ ಶಿಕ್ಷಣ ಸೌಲಭ್ಯದಿಂದ
ವಂಚಿತರಾದ ಸಹಸ್ರ ಸಹಸ್ರ ಮಂದಿ
ನಿಷ್ಠೆ, ತ್ಯಾಗ, ಮತ್ತು ಲೋಕಾನುಭವಗಳಿಂದ
ಸಂಸ್ಥೆಯನ್ನು ಅರ್ಥಮಾಡಿಕೊಂಡಿದ್ದಾರೆ;
ಬೆನ್ನಿಗಿದ್ದಾರೆ.

— ಶ್ರೀ ಶಿವಕುಮಾರಸ್ವಾಮಿಗಳು.

ಪ್ರಕಾಶಕರು:
ರಕರು ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

ಪ್ರಗತಿ ಪಥದ 26 ಸಂವತ್ಸರ ಅಮೋಘ ಸೇವೆ ಸಲ್ಲಿಸಿ ಮುನ್ನಡೆಯುತ್ತಿರುವ
ಭಾರತೀಯ ರಿಸರ್ವ ಬ್ಯಾಂಕ್ ಲೈಸನ್ಸ್ ಪುರಸ್ಕೃತ

## ತುಮಕೂರು ಧಾನ್ಯ ವರ್ತಕರ ಸಹಕಾರ ಬ್ಯಾಂಕ್ ನಿಯಮಿತ
### ಶ್ರೀ ಜಯಚಾಮರಾಜೇಂದ್ರ ರಸ್ತೆ, ತುಮಕೂರು.

ಬನ್ನಿ……. .. ……….

ಪರಸ್ಪರ ಬೆಳೆಯೋಣ ಏಪ್ರಿಲ್ 4, 1988 ರಿಂದ ಅಲ್ಪಾವಧಿಯ ಠೇವಣಿಗಳ ಮೇಲೆ
ಗಮನಾರ್ಹವಾಗಿ ಏರಿಸಿದೆ

**ನಿಶ್ಚಿತ ಠೇವಣಿ**

| | | |
|---|---|---|
| 46 ದಿವಸಗಳಿಂದ | 1 ವರ್ಷದವರೆಗೆ | ಶೇ 9 |
| 1 ವರ್ಷದಿಂದ | 2 ವರ್ಷದವರೆಗೆ | ಶೇ 10 |
| 2 ವರ್ಷದ ಮೇಲ್ಪಟ್ಟು | | ಶೇ 11 |

**ಉಳಿತಾಯ ಖಾತೆ** ಶೇ 6

**ಮಂಗಳ ಕ್ಯಾಷ್ ಸರ್ಟಿಫಿಕೇಟ್**

6.5 ವರ್ಷಗಳಲ್ಲಿ ನೀವು ಹೂಡಿದ ಹಣ ದ್ವಿಗುಣ
ಪ್ರತಿಯೊಬ್ಬ ಠೇವಣಿದಾರರು ಹೂಡುವ ರೂ 30,000.00 ಗಳವರೆಗೆ
ವಿಮಾ ರಕ್ಷಣೆ ಇರುತ್ತದೆ

ಎಲ್ಲಾ ವಾಣಿಜ್ಯ ಬ್ಯಾಂಕುಗಳಿಗಿಂತ ಠೇವಣಿ ಮೇಲೆ ಶೇ 1 ರಂತೆ ಹೆಚ್ಚಿನ ಬ

**ಪ್ರಗತಿಯ ನೋಟ : 31-12-1989** (ರೂ ಲಕ್ಷಗಳಲ್ಲಿ

| | | | |
|---|---|---|---|
| ಸದಸ್ಯರ ಸಂಖ್ಯೆ | : 1854 | | |
| ಅಧಿಕೃತ ಷೇರು ಬಂಡವಾಳ | : 50.00 | ಡಿಪಾಜಿಟ್‌ಗಳು | : 395.70 |
| | | ಚಾಲ್ತಿ ಬಂಡವಾಳ | : 671.53 |
| ಪಾವತಿಯಾದ ಷೇರು ಬಂಡವಾಳ | : 41.22 | ಸಾಲ ಮುಂಗಡ | : 480.88 |
| ರಿಸರ್ವ ಮತ್ತು ಇತರೆ | : 134.61 | | |

30-6-89 ಕ್ಕೆ ನಿವ್ವಳ ಲಾಭ : 30.16

ಎಲ್ಲಾ ರೀತಿಯ ಬ್ಯಾಂಕಿಂಗ್ ವ್ಯವಹಾರಗಳಿಗೆ ನಮ್ಮೊಡನೆ ಸಂಪರ್ಕ ಸಾಧಿಸಿ

ಆರ್. ಜಿ. ಅನಂತರಾಜಯ್ಯ — ಅಧ್ಯಕ್ಷರು
ಕೆ. ವೈ. ಶಿವಣ್ಣ — ಕಾರ್ಯನಿರ್ವಾಹಕ ನಿರ್ದೇಶಕ

## ತುಮಕೂರು ಧಾನ್ಯ ವರ್ತಕರ ಸಹಕಾರ ಬ್ಯಾಂ
## ನಿಮ್ಮ ಅಭಿವೃದ್ಧಿಗೆ ಬದ್ಧವಾದ ಬ್ಯಾಂಕ್

# ಸಿದ್ಧಗಂಗಾ

ಸಂಪುಟ-೨೮ ಸಂಚಿಕೆ-೪. ಎಪ್ರಿಲ್-೧೯೯೦

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಶರಣಾರ್ಥಿ ಶರಣಾರ್ಥಿ ಶರಣಾರ್ಥಿ ಶರಣಾರ್ಥಿ
ಶರಣಾರ್ಥಿ ಸಾಕಾರ ಮಹಾಲಿಂಗವೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

"ಶಿವಬಸವ ಶಿವಬಸವ ಕಲ್ಯಾಣಬಸವಣ್ಣ"
ತವಮಂತ್ರವಾಯಿತು ಶ್ರೀ ಗುರುವೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಎಲ್ಲಿ ಬಸವನಮಾತು ಎಲ್ಲಿ ಬಸವನಕಥನ
ಎಲ್ಲಿ ಬಸವನ ಮಣಿಹ ಅಲ್ಲಿರುವೆ। ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

— ಹೆಚ್. ವಿ. ವೀರಭದ್ರಯ್ಯ

# ಶ್ರೀ ವಾ ಣಿ



ಸೂರ್ಯ ಕ್ರಮ ತಪ್ಪದೆ ಉದಯಿಸುತ್ತಾನೆ, ಚಲಿಸುತ್ತಾನೆ, ಮುಳುಗುತ್ತಾನೆ. ಚಂದ್ರನೂ ಅಂತೆಯೇ ಕ್ರಮವಾಗಿ ನಡೆದು ಕೊಳ್ಳುತ್ತಿದ್ದಾನೆ. ನದಿಯ ನೀರು ಹರಿಯುತ್ತದೆ, ಮರದ ನೆರಳು ಹರಡುತ್ತದೆ, ಹೂವು ಅರಳುತ್ತದೆ, ಹಕ್ಕಿ ಹಾರುತ್ತದೆ ಹಸುಹಾಲು ಕರೆಯುತ್ತದೆ "ಹಾದಿ ಬೀದಿಯಲ್ಲಿರುವ ಕಸದಹುಲ್ಲನು ಹುಡುಕಿತಿಂದು" ಹಾಲು ಕರೆಯುತ್ತದೆ, ಬಾನು ಬೆಳಗುತ್ತದೆ, ಭೂಮಿ ಎಲ್ಲವನ್ನು ಸಹಿಸಿ ಹೋಗುತ್ತದೆ, ಹೀಗಿರುವಾಗ ಮನುಷ್ಯನೇಕೆ ತನ್ನ ಧರ್ಮದಿಂದ ದೂರ ಸರಿ ಯುತ್ತಿದಾನೋ? ತಿಳಿಯದಾಗಿದೆ. ಹಿರಿಯರಾಗಲಿ ಕಿರಿಯರಾಗಲಿ, ಹೆಣ್ಣಾಗಲಿ, ಗಂಡಾಗಲಿ, ಮನುಷ್ಯತ್ವದಿಂದ ಏಕೆ ದೂರಾಗಬೇಕು. ವಿವಿಧ ವೃತ್ತಿಗಳ, ಪ್ರವೃತ್ತಿಗಳ ಚಿತ್ತವೃತ್ತಿಗಳ ಮನುಷ್ಯರಿಂದು ವಿರುದ್ಧ ದಿಕ್ಕಿನಲ್ಲಿ ಸಾಗಿರುವುದೇಕೆ? ಧರ್ಮದ ಒಳತಿರುಳನ್ನು ತಿಳಿಯದೇ ಹೋಗಿರುವುದರಿಂದ ಅಲ್ಲವೆ? ಧರ್ಮ ವೆಂಧರೆ ಕೇವಲ ಲಾಂಛನ, ಕಾಂಚನಗಳಿಂದ ನಿರ್ಮಿತವಾದುದಲ್ಲ, ದಯಾ ಮೂಲದಿಂದ ಬಂದುದು. ಬಿದ್ದವರನ್ನು, ಬೀಳುತ್ತಿರುವವರನ್ನು, ಬೀಳಲಿರು ವವರನ್ನು ಉದ್ಧರಿಸುವುದೇ ಧರ್ಮ. ಅಂತರಂಗ ಬಹಿರಂಗ ಶುದ್ಧವಾಗಿರುವುದೇ ಧರ್ಮ. ಇಂದು ವಿದ್ಯಾರ್ಥಿ ಅಭ್ಯಾಸದಿಂದ ದೂರಸರಿದಿದ್ದಾನೆ, ಅಧ್ಯಾಪಕ ಅಧ್ಯಾಪನದಿಂದ ದೂರಸರಿದಿದ್ದಾನೆ, ವೈದ್ಯ ರೋಗಿಯ ಆರೈಕೆ ಮಾಡದೆ ಹವ ಹವಿಸುತ್ತಿದ್ದಾನೆ, ನ್ಯಾಯವಾದಿ ಕಕ್ಷಿದಾರನ ರಕ್ತ ಹೀರುತ್ತಿದ್ದಾನೆ, ರಾಜಕಾರಣಿ ಭ್ರಷ್ಟಾಚಾರದ ಬೇತಾಳನಾಗಿದ್ದಾನೆ, ಅಧಿಕಾರಿ ಆಮಿಷಗಳ ಆಗರವಾಗಿದ್ದಾನೆ, ಸಮಾಜ ಸುಧಾರಕರೆಂಬುವರು ನೈತಿಕ ದಿವಾಳಿ ಗೊಳ ಗಾಗಿದ್ದಾರೆ, ಸಂನ್ಯಾಸಿಗಳು ಸಂಸಾರಿಗಳಾಗುತ್ತಿದ್ದಾರೆ, ಮಠಾಧಿಪತಿಗಳು ಆಡಂಬರ, ವೈಭವಗಳಿಗೆ ಮಾರು ಹೋಗುತ್ತಿದ್ದಾರೆ, ರೈತ ಸೋಮಾರಿ ಯಾಗುತ್ತಿದ್ದಾನೆ, 'ತಾಯ ಮೊಲೆವಾಲು ನಂಜಾಗಿ' ಪರಿಣಮಿಸುತ್ತಿದೆ, ಇದಕ್ಕೆಲ್ಲ ಪರಿಹಾರವಿಲ್ಲವೆ? ಇದೆ. ಬಸವಣ್ಣನವರು ನೀಡಿರುವ ಮಹಾಸಂದೇಶ "ಇವನಾರವ ಇವನಾರವ ಇವನಾರವ ಎಂದೆನಿಸದಿರಯ್ಯ, ಇವನಮ್ಮವ ಇವನಮ್ಮವ ಇವನಮ್ಮವನೆಂದೆನಿಸಯ್ಯ" ಎಂಬ ಹೃದಯವಂತಿಕೆ ಬೇಕಾಗಿದೆ. ನನ್ನ ಹಾಗೆಯೇ ಇನ್ನೊಬ್ಬರನ್ನೂ ಸುಖ ಶಾಂತಿಯಿಂದ ಬದುಕಲು ಅವಕಾಶ ಕಲ್ಪಿಸಿಕೊಡಬೇಕಾದುದು ನನ್ನ ಧರ್ಮವೆಂದು ತಿಳಿಯಬೇಕಾಗಿದೆ.

## ಸಿದ್ಧಗಂಗಾ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ-572 104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪ್ರೊ|| ಚನ್ನಪ್ಪ ಎರೇಸೀಮೆ

* * *

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ವಿತರಣೆ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ


### ಚಂದಾ ವಿವರ

ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 250-00 ರೂ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ, ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು, ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ: ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

---

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572 104
ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಕೊಡಬೇಕಾಗಿ ಪ್ರಾರ್ಥನೆ

# ಶ್ರೀ ಸಿದ್ಧಲಿಂಗೇಶ್ವರ ವಚನ



ಪಶುವಿನ ಉದರದೊಳಗಿಪ್ಪ ಕ್ಷೀರ
ಶಿಶುವಿಂಗಲ್ಲದೆ ಪಶುವಿಂಗಲ್ಲದೆ ಇಪ್ಪಪರಿಯ ನೋಡಾ
ಪಶುವಿನ ಕಳೇವರದಿಂ ಪೊರಮಟ್ಟು, ಕಾಲಾಗ್ನಿಯಾಗಿ
ಪಶುವ ಕೊಂದಿತ್ತು ; ಶಿಶುವ ನುಂಗಿತ್ತು ;
ಪಶುಪತಿಯ ಕೂಡಿ, ಶಿಶುವಿಂಗೆ ಪಶುವಿಂಗೆ
ಹೊರಗಾದ ವಿಷಯಾತೀತನು ನಿಮ್ಮರಿವು
ಮಹಾಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೇ.

ಗೋವಿನ ದೇಹದಲ್ಲಿ ಹಾಲಿದೆ. ಆದರೆ ಅದು ಕರುವಿಗೂ ಅಲ್ಲದೆ, ಗೋವಿಗೂ ಅಲ್ಲದೆ ಇರುವಂತೆ ಚಿತ್ಪಾಂಡ ಸ್ವರೂಪಿಯಾದ ಶರಣನ ಹೃದಯ ಮಧ್ಯದಲ್ಲಿರುವ ಪರಮಾತ್ಮ ಸ್ವರೂಪಿಯಾದ ಜ್ಞಾನವು ಕಾಷ್ಠದಲ್ಲಿರುವ ಅಗ್ನಿಯಂತೆ, ಬೂದಿ ಮುಚ್ಚಿದ ಕೆಂಡದಂತೆ ಶಿಷ್ಯನಿಗೆ ಬೋಧಿಸುವುದಕ್ಕೆ ಬರದೆ ಅಂತರಂಗದಲ್ಲಿದೆ. ಅಂತಹ ಜ್ಞಾನವು ಶ್ರೀ ಗುರುವಿನ ಉಪದೇಶದಿಂದ ಪ್ರಕಟವಾಗಿ ಚಿದಗ್ನಿ ಸ್ವರೂಪದಿಂದ ಶರಣನ ಜೀವಭಾವವನ್ನು ನಿವೃತ್ತಿ ಮಾಡಿದ ಜ್ಞಾನ ಕಳಾತ್ಮನ ಸರ್ವಾಂಗ ಲಿಂಗವಾಗಿ ವ್ಯಾಪಿಸಿತ್ತು. ಅಂತಹ ಜ್ಞಾನ ಶಿವವು ಜೀವನ ವೃತ್ತಿ ಜ್ಞಾನವಲಯ ಮಾಡಿ, ಶರಣಲಿಂಗವೆಂದು ಇದಿರಿಟ್ಟ ಆಚರಿಸಿದ ಜ್ಞಾನ ಕಳಾತ್ಮಕನ ಸತ್ಕ್ರಿಯಾ ಸಮ್ಯಕ್ ಜ್ಞಾನವು ಲಿಂಗದಲ್ಲಿ ನಿಷ್ಪಕ್ತಿಯಾಗಿ, ಕಣ್ಣಿಗೆ ಅಗೋಚರವಾಗಿ ಹೋಯಿತ್ತು- ಎನ್ನುತ್ತದೆ ವಚನ.

# ಅಣ್ಣನಿಗೊಂದು ಓಲೆ.

ಎಂಟು ಶತಮಾನಗಳಹಿಂದೆ ನೊಂದ
ನಮ್ಮ ಬದುಕಿಗೆ ತಂಪ ತಂದಿದ್ದೆ, ನಮ್ಮೆಲ್ಲರ
ತಂಗಿಯೆಂದೆ; ತಾಯಿಯೆಂದೆ; ಮಹಾದೇವಿಯಂತೆ ಕಂಡೆ.
ಕಂಬನಿಯ ಒರಸಿದೆ. ಬಂಧ ಮುಕ್ತಗೊಳಿಸಿದೆ.
ಸ್ವಾವಲಂಬನನ ಕಲಿಸಿದೆ, ಅನುಭಾವಿಗಳಾಗಿಸಿದೆ.
ಜ್ಞಾನನಿಧಿಗಳಾಗಿಸಿದ್ದೆ. ಮುಕ್ತಿ ಮಾರ್ಗವ ತೋರ್ಪೆ.
ಅಣ್ಣ, ನಿನ್ನಿಂದೊಂದು ಹೊಸ ಲೋಕ ಕಂಡೆವಂದು
ನೀ ಬಂದೂರ್ಗೆ ತೆರಳಿದೆ. ಮತ್ತೊಮ್ಮೆ
ಬದುಕು ಬರಡಾಯ್ತು. ಇಂದು ದಿನದಿನವು
ಕೃಶಳಾಗಿ ಇದ್ದೂ ಇಲ್ಲದಂತೆ ಬಾಳುತ್ತಿರುವ ನಮ್ಮಸ್ಥಿತಿಕೇಳು.
ವರದಕ್ಷಿಣೆಯ ಆಸೆಗೆನುಗೆ ಬೆಂಕಿ ಹಚ್ಚಿದರು.
ಸತೀ ಪದ್ದತಿಗೆನ್ನ ದೂಡಿದರು.
ದೇವದಾಸಿಯರಾಗಿಸಿದರು, ಬೆತ್ತಲೆ ಸೇವೆ ಮಾಡಿಸಿದರು
ನಾಪ್ರತಿಭಟಿಸಿದರೂ ನನ್ನವರೇ ನನ್ನ ಆರ್ತನಾದಕ್ಕೆ
ಕಿವಿಮುಚ್ಚಿ ಕಣ್ಮುಚ್ಚಿ ಕುಳಿತಿದ್ದರು.
ಅಶಾಂತಿಯ ಮನ ಅತ್ತೆಯರ ಹಿಂಸೆ.
ಪತಿಯ ಬಡಿದಾಟ, ಈ ಮೂಕಯಾತನೆಯ
ಎಷ್ಟು ದಿನತಾಳಲಿ ? ಎಂತು ಮೊರೆಯಿಡಲಿ?
ನನ್ನಿರವ ಕೇಳಿ ವ್ಯಥೆಪಡದಿರು, ಕೊಪಗೊಳ್ಳದಿರು.
ಮರುಗದಿರು, ಕೊರಗದಿರು ಅಂತೂ ಇಂತೆ
ಇಪ್ಪತ್ತನೇ ಶತಮಾನ ಕಳೆಯುತ್ತ ಇಪ್ಪತ್ತೊಂದನೇ ಶತಮಾನಕ್ಕೆ
ಅಡಿಯಿಡುತ್ತಿಹೆವು. ಮುಂದೆ ಬದಲಾಗುವುದೇನೋ
ನಮ್ಮೆಲ್ಲರ ಜೀವನಗತಿ, ಅಂತಾದರೆ ಬರೆವೆ
ನಾನಿನಗಿನ್ನೊಂದು ಸಂತಸದ ಓಲೆ.
ಆನಿರೀಕ್ಷೆಯಲ್ಲಿ ನಾನಿದ್ದೇನೆ, ಅಣ್ಣನಾಸಿರುವೆ.

"ರಾಜೇಂದ್ರಶಿಶು" ಮೈಸೂರು.

# ಸಂಪಾದಕೀಯ

## ಬಸಜಯಂತಿ

ಇದು ಜಯಂತಿಗಳಯುಗ, ಒಂದಿಲ್ಲೊಂದು ಜಯಂತಿ ನಡೆದಿರುವಯುಗ, ಬಸವಣ್ಣನವರದು ವಿಶಿಷ್ಟವಾದ ವ್ಯಕ್ತಿತ್ವ. ಬಹುಮುಖವಾದ ಪ್ರತಿಭೆ ಅನಂತವಾದ ಚಿಂತನ ಭೂತ ವರ್ತಮಾನ ಭವಿಷ್ಯತ್‌ಗಳಿಗೆಲ್ಲ ಪ್ರಸ್ತುತ ಬಸವಣ್ಣ ಮುಕ್ತ ಚಿಂತನ ಶೀಲ ಕ್ರಿಯಾತ್ಮಕ ಚೇತನ, ಸಮಾಜ ಸುಧಾರಕ, ಆರ್ಥಿಕತಜ್ಞ ಶಿಕ್ಷಣವೇತ್ತ, ರಾಜಕೀಯ ಮುತ್ಸದ್ದಿ, ಆಧ್ಯಾತ್ಮಿಕ ವಿಜ್ಞಾನಿ, ಇಹ-ಪರಗಳೆರಡಕ್ಕೂ ವಿನೂತನ ಅರ್ಥನೀಡಿದ ಮಹಾಮಾನವತಾವಾದಿ. ಜಡದಿಂದ ಜಂಗಮದಕಡೆಗೆ, ಅಲ್ಪದಿಂದ ಭೂಮತ್ವದೆಡೆಗೆ ಹರಿದು, ಯುಗವನ್ನೇ ನಡೆಸಿದ ಅದ್ಭುತ ಮೇಧಾವಿ. ಇಂದು ವಿಚಾರವಂತರೆಲ್ಲ ಬಸವಣ್ಣನವರ ವಿಚಾರಧಾರೆಯನ್ನು ಸ್ವಾಗತಿಸುತ್ತಿದ್ದಾರೆ.

ಬಸವಣ್ಣ ಕಲ್ಯಾಣದಲ್ಲಿ ಮಾಡಿದ್ದೇನು? ರೂಢ ಮೂಲವಾಗಿದ್ದ ಸಂಪ್ರದಾಯಗಳ ವಿರುದ್ಧ ಸಿಡಿದೆದ್ದದ್ದು. ಪುರೋಹಿತಶಾಹಿ-ಅಧಿಕಾರಶಾಹಿಗಳನ್ನು ಪ್ರತಿಭಟಿಸಿದ್ದು ಅಷ್ಟೇ ಅಲ್ಲ ವ್ಯಕ್ತಿಮೂಲ ಭೂತವಾಗಿ ವಿಚಾರ ಮಾಡಬೇಕಾದ ದಿಕ್ಕನ್ನೇ ಬದಲಿಸಿದ್ದು. ಸ್ವಾನುಭವಕ್ಕೆ ಬರದಯಾವುದನ್ನೂ ಒಪ್ಪದೇ ಹೋದದ್ದು. ತಾರ-ತಮ್ಯವನ್ನು ಉಚ್ಚಾಟಿಸಿದ್ದು. "ವಿಪ್ರಮೊದಲು ಅಂತ್ಯಜ ಕಡೆಯಾಗಿ" ಸಚ್ಚಾರಿತ್ರ್ಯವಂತರನ್ನೂ ತಲೆಯ ಮೇಲೆ ಹೊತ್ತು ಗೌರವಿಸಿದ್ದು. ಸ್ತ್ರೀ ಜನಾಂಗವನ್ನು ವಿಮುಕ್ತಿಗೊಳಿಸಿದ್ದು, ದೀನ ದಲಿತರಿಗೆ ದನಿಯಾಗಿ ಬಂದದ್ದು. ವಿನೀತನಾಗಿ ಅವರೆಲ್ಲರಲ್ಲಿ ಆತ್ಮ ವಿಶ್ವಾಸತುಂಬಿ ಸಂಸ್ಕರಿಸಿದ್ದು. ಭಾಷಾ ಶ್ರೀಮಂತಿಕೆಯನ್ನು ಕನ್ನಡಕ್ಕೆ ತಂದು ಕೊಟ್ಟದ್ದು. ಕ್ರಿಯಾಶೀಲ ಜನಾಂಗ ನಿರ್ಮಾಣ ಮಣಿಹದಲ್ಲಿ ದುಡಿದು-ದುಡಿದು ದುಡಿನುಡಿಸಿದ್ದು- ವ್ಯಕ್ತಿ ಸಮಾಜಗಳ ಜೀವನವನ್ನು ನೈತಿಕ ಸೋಪಾನದ ಮೇಲೆ ಕಟ್ಟಿದ್ದು. ವಚನ ಸಾಹಿತ್ಯ ಸುಗ್ಗಿಗೆ ತಂಗಾಳಿಯಾಗಿ ಬೀಸಿದ್ದು. ಒಂದೇ ಎರಡೇ ಬಸವಣ್ಣನವರು ಮಾಡಿದ್ದು. ಚಿಂತಿಸಿದಷ್ಟು ಅಕ್ಷಯ ಅವರ ವ್ಯಕ್ತಿತ್ವ-ಎತ್ತರವಾಗಿ ಬಾಳಿದರು ಪುರಾಣ ಪುರುಷರಾಗುವಷ್ಟು ಬೆಳಗಿದರು. ಆದರೆ ಬಸವಣ್ಣ ಪುರಾಣವ್ಯಕ್ತಿಗಳಲ್ಲ. ಚಾರಿತ್ರಿಕ ಪುರುಷರು. ಅವರು ಕಟ್ಟಲೆಳಸಿದ ಸರ್ವೋದಯ ಸಮಾಜ ಅನಂತರ ಬಂದ ಜಗತ್ತಿನ ಮಹಾಪುರುಷರಿಗೆ ಆಂತರಿಕ ಪ್ರೇರಣೆಯನ್ನೊದಗಿಸಿತು ಅವರಿಂದು ಯಾವ ಮನಸ್ಸುಗಳಿಗೆ ಪ್ರಿಯರಾಗಬೇಕಾಗಿದೆ ಪ್ರಿಯರಾಗುವಂತೆ ಬಸವತತ್ವಾಭಿಮಾನಿಗಳು ಕಾರ್ಯಕ್ರಮಗಳನ್ನು ರೂಪಿಸಬೇಕಾಗಿದೆ. ಮಾನವ ಸಂಪನ್ಮೂಲ ವ್ಯರ್ಥವಾಗದೇ ಇರಬೇಕಾದರೆ ಬಸವಣ್ಣನವರು ಹೇಳಿದ ಗುರು-ಲಿಂಗ-ಜಂಗಮ-ಪ್ರಸಾದ-ಕಾಯಕ-ದಾಸೋಹದಂಥ ಪಾರಿಭಾಷಿಕ ಪದಗಳಿಗೆ ಆಧುನಿಕವಾದ ವ್ಯಾಪಕವಾದ ಅರ್ಥ ನೀಡಿ

ಯುವ ಜನಾಂಗವನ್ನು ಮುನ್ನಡೆಸಬೇಕಾಗಿದೆ. ಏಳೆಂಟು ವರುಷ ವಯಸ್ಸಿನ ಮಕ್ಕಳಿಗೆ ಪ್ರಿಯವಾಗುವಂತ ಚಟುವಟಿಕೆಗಳಲ್ಲಿ ಬಸವಣ್ಣನವರ ಇನ್ನಿತರ ಶರಣರ ವಚನಗಳನ್ನು ಅಳವಡಿಸಬೇಕಾಗಿದೆ. ವಿವಿಧ ಹಂತದ ವಿದ್ವತ್, ಪಂಡಿತ, ಬಿ.ಎ., ಎಂ.ಎ., ಪರೀಕ್ಷೆಗಳಲ್ಲಿ ವಚನಾಭ್ಯಾಸವನ್ನು ಸೇರಿಸಬೇಕಾಗಿದೆ. ಸಂಸ್ಕೃತ ಪರೀಕ್ಷೆಗಳಲ್ಲಿ ಅದರಲ್ಲೂ ಶಿವಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತ ವಿದ್ವತ್ ಪರೀಕ್ಷೆಗೆ ಕೂಡುವವರಿಗೆ ಬಸವಾದಿ ಶರಣರ ವಚನಾಭ್ಯಾಸವನ್ನು ಸಹ್ಯವಿಷಯವನ್ನಾಗಿ ನಿಯಮಿಸದೇ ಹೋದರೆ ಶಿವಾದ್ವೈತ ಸಿದ್ಧಾಂತದ ಪರಿಪೂರ್ಣಕಲ್ಪನೆಯೇ ಆಗಲಾರದು. ಅರಿವಿಗೆ ಅನುಭಾವವೇ ಆಶ್ರಯ ಎಂಬುದನ್ನು ಸಮಗ್ರವಾಗಿ ಸಮರ್ಥವಾಗಿ ಪ್ರತಿಪಾದಿಸುವ ವಚನಾಧ್ಯಯನ ಅತ್ಯಗತ್ಯ. ಯಾವುದೇ ಸಾರ್ವಜನಿಕ ಸಮಾರಂಭವಾಗಿರಲಿ, ಮನೆಯ ಹಬ್ಬ ಶುಭದಿನಗಳಾಗಿರಲಿ, ಮದುವೆ ಮುಂತಾದುವುಗಳಾಗಿರಲಿ, ಶಿವಗಣಾರಾಧನೆಯಾಗಿರಲಿ ಬಸವಣ್ಣನವರಾದಿಯಾದ ಶರಣರ ವಚನಗಳನ್ನು ಪಠಿಸುವ, ಕಾರ್ಯಕ್ರಮಗಳು ಹೆಚ್ಚಾಗಬೇಕು. ಮಠಾಧಿಪತಿಗಳು, ಸ್ವಾಮಿಗಳು, ಮಹಂತರು, ಪ್ರತಿನಿಧಿಗಳು ಮುಂತಾದವರು ಬಿನ್ನಹಕ್ಕೆ ನಡೆದಾಗ ವ ಚ ನ ಗ ಳ ನ್ನು ಹೇಳಿಕೊಡಬೇಕು. ವಚನಗ್ರಂಥಗಳನ್ನು ಕೊಟ್ಟು ಬರಬೇಕು. "ಎತ್ತೆತ್ತ ನೋಡಿದಡತ್ತ ಬಸವ"-ವಚನ ದೀವಿಗೆಯ ಬೆಳಕು ಚೆಲ್ಲುವಂತೆ ಪರಿಸರ ನಿರ್ಮಾಣ ಮಾಡಬೇಕು. ಬಸವಣ್ಣ ಕಲ್ಯಾಣವನ್ನೇ ಪ್ರಣತಿಯನ್ನಾಗಿಸಿದ್ದ. ಆ ಪ್ರಣತಿಯ ಬೆಳಕು ಆರದಂತೆ ನೋಡಿಕೊಳ್ಳಬೇಕು. ಈ ದಿಸೆಯಲ್ಲಿ ನಿರಂತರವಾಗಿ ಶ್ರಮಿಸುತ್ತಿರುವ ಮಠಾಧಿಪತಿಗಳು, ಬಸವನಾಮಾಂಕಿತ ಸಂಘ ಸಂಸ್ಥೆಗಳು, ತತ್ವಾಭಿಮಾನಿಗಳು ಸ್ಮರಣಾರ್ಹರು. ಅಂತೆಯೇ ಬಸವನಿಂದೆಯಲ್ಲಿ ನಿರತರಾಗಿರುವರೆಲ್ಲರೂ ಖಂಡನೀಯರು. "ಹಣ್ಣು ಮೆದ್ದಬಳಿಕ ಆ ಮರವನಾರು ತಂದರೇನು? ಎಂಬಂಥ ಮನಸ್ಸುಗಳು ಸಲ್ಲವು. ಕನ್ನಡಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯನವರು ಹೇಳುವಂತೆ "ಬಸವಣ್ಣನನ್ನು ಕುರಿತು ನಾವು ಚಿಂತಿಸಿದಷ್ಟು ಅವರು ಎತ್ತರಕ್ಕೆ ಬೆಳೆಯುತ್ತಾರೆ ಬೆಳೆಯುತ್ತಲೇ ಹೋದವ್ಯಕ್ತಿತ್ವ ಅವರದು. ಎತ್ತರವನ್ನುಕಂಡು ನಾವೂ ಎತ್ತರವಾಗುತ್ತೇವೆ" ಎಂಬ ಮಾತು ಅದೆಷ್ಟು ಔಚಿತ್ಯಪೂರ್ಣ.

# ಬಸವಾದಿ ಶರಣರ ಶಿವಾನುಭವ

ಶ್ರೀ ಮ. ನಿ. ಪ್ರ. ಮಹಾಂತ ಶಿವಯೋಗಿಗಳು ಚಿತ್ತರಗಿ, ಇಲಕಲ್ಲ.

ಮಹಾಮಹಿಮ ಸಂಗನಬಸವಣ್ಣ
ಎನಗೆಯೂ ಗುರು ನಿಮಗೆಯೂ ಗುರು
ಜಗವೆಲ್ಲಕ್ಕೆಯೂ ಗುರು ಕಾಣಾ ಗುಹೇಶ್ವರಾ

ಸಕಲ ಜೀವಾತ್ಮರ ಲೇಸನೇ ಬಯಸಿದ ಲೋಕ ಪೂಜ್ಯರಾದ ವಿಶ್ವಗುರು ಬಸವಣ್ಣನವರನ್ನು ಸ್ಮರಿಸಿ ಕಲ್ಯಾಣದಪ್ಪಗಳವರ ನಿರಂಜನ ಮಹಾ ಬೆಳಗಿನಲ್ಲಿ ಬೆಳಕಾಗಿರುವ ಹಾಗೂ ಎಂಬತ್ತು ಮೂರನೆಯ ಜನ್ಮ ದಿನೋತ್ಸವದ ಮಹಾ ಬೆಳಗಿನಂಗಳದಲ್ಲಿ ಜಂಗಮ ಜ್ಯೋತಿಯಾದ ಪರಮ ಪೂಜ್ಯ ಡಾ॥ ಶ್ರೀ ಶಿವಕುಮಾರಮಹಾಸ್ವಾಮಿಗಳ ಜಂಗಮ ಪಾದಾರವಿಂದಗಳಲ್ಲಿ ಶರಣು ಸಮರ್ಪಿಸಿ.

ನಮ್ಮ ನಾಡಿನ ಆರುಹಿನ ಹಿರಿಯ ಚೈತನ್ಯ ಮೂರ್ತಿಗಳಾದ ಜನನಾಯಕ ಸನ್ಮಾನ್ಯ ಶ್ರೀ ವೀರೇಂದ್ರ ಪಾಟೀಲರು ಮುಖ್ಯ ಮಂತ್ರಿಗಳು ಕರ್ನಾಟಕ ರಾಜ್ಯ ಅವರಲ್ಲಿ ಶರಣು ಸಲ್ಲಿಸಿ "ಶ್ರೀ ಶಿವಕುಮಾರ ಚರಿತಂ" ಗ್ರಂಥ ಬಿಡುಗಡೆಗಾಗಿ ಆಗಮಿಸಿದ ಅರ್ಥ ಸಚಿವರಾದ ಸನ್ಮಾನ್ಯ ಶ್ರೀ ಎಂ. ರಾಜಶೇಖರಮೂರ್ತಿಗಳವರೇ, ಮುಖ್ಯ ಅತಿಥಿಗಳಾಗಿ ಆಗಮಿಸಿದ ನೀರಾವರಿ ಮತ್ತು ಲೋಕೋಪಯೋಗಿ ಸಚಿವರಾದ ಸನ್ಮಾನ್ಯ ಶ್ರೀ ಪುಟ್ಟಸ್ವಾಮಿಗೌಡರೇ, ಹಾಗೂ ಪೂಜ್ಯ ಪಾದರಲ್ಲಿ ಭಕ್ತಿ ಸಮರ್ಪಣಾ ನುಡಿಯನ್ನು ನೀಡಲು ಆಗಮಿಸಿದ ವಿಧಾನ ಪರಿಷತ್ತು ಸದಸ್ಯರಾದ ಸನ್ಮಾನ್ಯ ಶ್ರೀ ಬಿ. ಬಿ. ಶಿವಪ್ಪನವರೇ ರಾಷ್ಟ್ರದ ನಾಯಕ ಮಣಿಗಳಾದ ಸನ್ಮಾನ್ಯ ಶ್ರೀ-ನಿಜಲಿಂಗಪ್ಪನವರೇ, ಸನ್ಮಾನ್ಯ ಶ್ರೀ ಕೆ. ಎಲ್. ನಂಜಪ್ಪನವರೇ, ಗುಲ್ಬರ್ಗಾ ವಿ. ವಿ. ಉಪಕುಲಪತಿಗಳಾದ ಡಾ ॥ ಎನ್. ರುದ್ರಯ್ಯನವರೇ, ಪ್ರೊ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಪೀಠದ ನಿವೃತ ನಿರ್ದೇಶಕರಾದ ಡಾ ॥ ಹೆಚ್. ತಿಪ್ಪೇರುದ್ರಸ್ವಾಮಿಗಳವರೇ. ಪೂಜ್ಯರ 83ನೇ ಜನ್ಮ ದಿನೋತ್ಸವ ಸಂದರ್ಭದಲ್ಲಿ ಪಾಲ್ಗೊಳ್ಳಲು ಆಗಮಿಸಿರುವ ಸಮಸ್ತ ಪೂಜ್ಯರೇ, ಶರಣ ತಂದೆ-ತಾಯಿಗಳೇ ತಮ್ಮೆಲ್ಲರಿಗೂ ಶರಣು ಶರಣಾರ್ಥಿಗಳು.

ಪರಮ ಪಾವನ ಶ್ರೀ ಕ್ಷೇತ್ರ ಸಿದ್ಧಗಂಗೆಯ ಜಂಗಮ ಚೈತನ್ಯಲಿಂಗವಾಗಿರುವ, ತ್ರಿವಿಧ ದಾಸೋಹ ಮೂರ್ತಿಗಳೂ, ಬಸವಾದಿ ಪ್ರಮಥರ ಮಹಾ ಸಂದೇಶಕ್ಕೆ ಪ್ರತ್ಯಕ್ಷ ಪ್ರಯೋಗಶಾಲೆಯಾದವರೂ ನುಡಿ-ಲಿಂಗ-ನಡೆ-ಲಿಂಗವಾಗಿ ವಿಶ್ವವನ್ನು ಮುನ್ನಡೆಯಿಸಬಲ್ಲ ಕರ್ತಾರನ ಕಮ್ಮಟವಾದವರೂ ಆದ ಪೂಜ್ಯ ಶ್ರೀ ಡಾ॥ ಶಿವಕುಮಾರ

ಮಹಾಸ್ವಾಮಿಗಳವರ ಪವಿತ್ರ ಜ್ಞಾನ ಪ್ರಸಾದ ದರ್ಶನಾಕಾಂಕ್ಷಿಗಳಾಗಿ ಇಂದು ನಾವಿಲ್ಲಿಗೆಬಂದಿದ್ದೇವೆ. ಕಾಶಿ, ಶ್ರೀಶೈಲ ಮೊದಲಾದ ಪುಣ್ಯ ಕ್ಷೇತ್ರಗಳನ್ನು ಕ್ಷೇತ್ರ ಪರಮಪೂಜ್ಯಶಿವಕುಮಾರ ಮಹಾಸ್ವಾಮಿಗಳವರ ಸುಜ್ಞಾನ ಶ್ರೀ ಪಾದವೇ ಸುಕ್ಷೇತ್ರ ವಾಗಿ ನಮಗೆಲ್ಲ. ಪೂಜ್ಯ ಶಿವಕುಮಾರ ಅಪ್ಪಗಳವರು ತಮ್ಮ ಅರುಹಿನ ಎತ್ತರದಿಂದ ಅನುಭವದ ಬಿತ್ತರದಿಂದ ಚಲಿಸುತ್ತಿರುವ ದೇವಾಲಯವಾಗಿದ್ದಾರೆ. ದೇಹವೇ ದೇವಾಲಯವಾಗಿರುವಾಗ, ಸತ್ಯಜ್ಞಾನ ಚೈತನ್ಯವೇ ಜಂಗಮ ಲಿಂಗವಾಗಿರುವ. ಮತ್ತೆ ಬೇರೆ ಜಡ. ಮೂರ್ತಿಗಳಿಗೆ ಹೋಗುವ ಹಂಗಾದರೂ ನಮಗೇಕೇ ?

"ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ
ಪ್ರಾಣದಲ್ಲಿ ನಿರ್ಭಯ ಚಿತ್ತದಲ್ಲಿ ನಿರಪೇಕ್ಷೆ
ವಿಷಯದಲ್ಲಿ ಉದಾಸೀನ ಭಾವದಲ್ಲಿ ದಿಗಂಬ
ಜ್ಞಾನದಲ್ಲಿ ಪರಮಾನಂದ ನೆಲೆಗೊಂಡ ಬಳಿಕ
ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ ಕಾಣಿಭೋ"

ಎಂದು ಶರಣ ಆದಯ್ಯನವರು ಸಾರಿದ್ದು, ಇಂಥ ಪೂಜ್ಯ ಶಿವಕುಮಾರ ಅಪ್ಪಗಳವರ ಅರುಹಿನಿಂದ ಒಪ್ಪಿತವಾಗಿರುವ ದಿವ್ಯ ಜೀವನವನ್ನು ಪ್ರತ್ಯಕ್ಷ ಕಂಡೇ ಅಲ್ಲವೇ ? ನಿಜವನರಿದ ನಿಶ್ಚಿಂತರು ಇವರು. ಮರಣವ ಗೆಲಿದ ಮಹಾಂತರು ಇವರು. ಪರವನೊಳಕೊಂಡ ಪರಿಣಾಮಿ ಇವರು. ನಿರಾಳವನೊಳಕೊಂಡ ಸಹಜ ಶೀಲರು ಇವರು. ಇಂಥ ಸಹಜ ಶಿವಯೋಗಿಗಳವರನ್ನು ಪಡೆದ ಇಪ್ಪತ್ತನೆಯ ಶತಮಾನದ ಕಾಲ ಭಾಗ್ಯದ ಕಾಲ. ಇವರನ್ನು ಪ್ರತ್ಯಕ್ಷ ಕಾಣುವ ಪುಣ್ಯಪಡೆದ ನಾವು ಭಾಗ್ಯ ವಂತರು ಶಿವಚೈತನ್ಯದಲ್ಲಿ ಅಖಂಡವಾದ ನಂಬಿಕೆ ಇರಿಸಿ; ಸಕಲ ಜೀವಾತ್ಮರಿಗೆ ಲೇಸನೇ ಬಯಸುವವನೇ ಮಹಾ ಶರಣ, ವ್ಯಕ್ತಿ ಪರಿವರ್ತನೆ ಹಾಗೂ ವಿಶ್ವಪರಿವರ್ತನೆ ಬಸವಾದಿ ಶರಣರು ಪರಮ ಗುರಿ. ಎಲ್ಲ ಕಾಲಕ್ಕೂ ಇಂದಿನ ದಿನಗಳಲ್ಲಿ ಶರಣರ ವಚನಗಳ ಅಗತ್ಯತೆಹೆಚ್ಚಾಗಿದೆ.

ಈ ಶತಮಾನದ ಜ್ವಲಂತ ಸಮಸ್ಯೆಗಳಾದ ಭಾಷಾಭೇದ, ಜಾತಿಭೇದ. ಧರ್ಮಭೇದ, ಜನಾಂಗಭೇದ ಹಾಗೂ ವರ್ಣಭೇದಗಳಿಂದ ಜಗತ್ತು ತತ್ತರಿಸಿ ಹೋಗುತ್ತಿದೆ. ಸಿಲೋನ್, ಪಂಜಾಬ, ಕಾಶ್ಮೀರ, ಡಾರ್ಜಿಲಿಂಗ, ಅಸಾಂಗಳಲ್ಲಿ ಪ್ರತಿನಿತ್ಯ ಮುಗ್ಧ ಮಾನವರ ರಕ್ತ ಹರಿದು ಹೋಗುತ್ತಿದೆ. ದಕ್ಷಿಣ ಆಫ್ರಿಕ, ಜರ್ಮನಿಗಳು ಜಾಗತಿಕ ವರ್ಣಭೇದ ಜನಾಂಗಭೇದ ನೀತಿಗೆ ಬಲಿಪಶುವಾಗಿವೆ. ಇಂದು ಪರಮ ಪಾವನ ಮೂರ್ತಿಗಳಾದ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳಂತಹ ಪಾವನ ತಪೋ ಮೂರ್ತಿಗಳ, ಶಿವಯೋಗಿರಕ್ಷೆಯಲ್ಲಿ ದಕ್ಷಿಣ ಭಾರತಪ್ರಾಂತ ಶೀಲವಾಗಿದೆ ನಮ್ಮಲ್ಲಿಯ

ಒಳಾಂಗಣದ ಸಮಸ್ಯೆಗಳಾದ ಜಾತಿಯೊಳಗಿನ ಜಾತಿಗಳು. ಮಡಿಮೈಲಿಗೆಗಳು, ಶರಣರನ್ನು, ವಿಶ್ವಗುರು ಬಸವಣ್ಣನವರನ್ನೂ ಎಡದ ಕಣ್ಣಿನಿಂದ ಕಾಣುವ ಜಾತಿ ಭ್ರಮೆಗಳು, ಮಾನವರ ಹೆಗಲ ಮೇಲೆ ಮಾನವರು ಕೂತುಮೆರೆವ ಅಡ್ಡಪಲ್ಲಕ್ಕಿಗಳು, ಮದುವೆಗಳಲ್ಲಿ ದುಂದುವೆಚ್ಚ, ವರದಕ್ಷಿಣೆಯ ಶೋಷಣೆ, ಉಚ್ಚ-ನೀಚಭಾವ, ದೇವದಾಸಿ ಪದ್ಧತಿ, ಕುಡಿತ-ಇಸ್ಪೀಟ-ತಂಬಾಕ-ಓಸಿ ಮುಂತಾದ ಚಟಗಳು; ಇವುಗಳ ವಿರುದ್ಧವಾಗಿ ಪರಮ ಪೂಜ್ಯ ಶಿವಕುಮಾರ ಮಹಾಸ್ವಾಮಿಗಳು ಹಲವು ದಶಕಗಳಿಂದ ಯುದ್ಧವನ್ನೇ ಸಾರಿದ್ದಾರೆ.

ಇಂದಿನ ವಾಮಾಚಾರಗಳಿಗೆ ನಮ್ಮ ಮಕ್ಕಳು ಬಲಿಯಾಗಬಾರದೆಂದು, ಪೂಜ್ಯ ಶಿವಕುಮಾರ ಮಹಾಸ್ವಾಮಿಗಳವರು ಪ್ರಸಾದ ನಿಲಯದ ಮಹಾನ್ ಆಶ್ರಯ ನೀಡಿ, ಲಕ್ಷಾಂತರ ವಿದ್ಯಾರ್ಥಿಗಳಿಗೆ ಅನ್ನದಾಸೋಹ, ಅರುಹಿನ ದಾಸೋಹ ನೀಡಿದ್ದಾರೆ. ಸಿದ್ಧಗಂಗೆಯ ಪ್ರಸಾದದಲ್ಲಿ ಬಸವಾದಿ ಶರಣರು ವಾಸಮಾಡಿದ್ದಾರೆ. ಶರಣರು ಸಾರಿದ ಪ್ರಸಾದ ಸಿದ್ಧಾಂತಕ್ಕೆ ಇಂದು ಅತಿ ದೊಡ್ಡ ಏಟು ಬಿದ್ದಿದೆ. ಸಿಕ್ಕಲ್ಲಿ ತಿಂದು, ಸಿಕ್ಕಲ್ಲಿ ಉಂಡು, ಸಿಕ್ಕಿದ್ದನ್ನು ಸೇವಿಸುವ ಅಂತರಪಿಶಾಚಿಗಳು ಇಂದು ನಾಡತುಂಬ ತಿರುಗಾಡುತ್ತಲಿದ್ದಾರೆ. ಪ್ರಸಾದವೇ ಪವಿತ್ರ ಜೀವನದ ಭದ್ರ ಅಡಿಗಲ್ಲು ಎಂದು ಶರಣರು ಅಖಂಡವಾಗಿ ನಂಬಿದ್ದರು. ಪ್ರಾಸಾದಿಕರು ಎಂದರೆ ಪವಿತ್ರ ಜೀವನಕ್ಕೆ ಪೂರಕವಾದ ಪವಿತ್ರ ಪ್ರಸಾದವನ್ನು ಶಿವಸ್ಮರಣೆಯಲ್ಲಿ ಸ್ವೀಕರಿಸಿದವರು ಎಂದರ್ಥ. ಕಾಯಕವಿಲ್ಲದೆ ಪ್ರಸಾದವಿಲ್ಲ. ಪ್ರಸಾದವಿಲ್ಲದೆ ಲಿಂಗಾಂಗ ಸಾಮರಸ್ಯವಿಲ್ಲ. ಕಾಯಕ ಪ್ರಸಾದ, ಲಿಂಗಾಂಗ ಸಾಮರಸ್ಯಗಳ ಗುಟ್ಟು ಬಲ್ಲವನೇ ತ್ರಿವಿಧ ದಾಸೋಹಿ ಈತನೇ ವೀರದಾಸೋಹಿ, ಈತನೇ ಮಹಾದಾಸೋಹಿ. ಈ ನಿಟ್ಟಿನಲ್ಲಿ ನಮ್ಮೆದುರಿನಲ್ಲಿ ತೊಳಗಿ ಬೆಳಗುತ್ತಿರುವ ಪೂಜ್ಯ ಶ್ರೀ ಶಿವಕುಮಾರ ಮಹಾಅಪ್ಪಗಳವರು ವೀರ ದಾಸೋಹಿಗಳು. ಮಹಾದಾಸೋಹಿಗಳು ಇವರಿಂದ ವ್ಯಕ್ತಿಪರಿವರ್ತನೆ ಹಾಗೂ ವಿಶ್ವಪರಿವರ್ತನೆಗಳ ಸಮಗ್ರ ಕಲ್ಯಾಣ ಸಾಧ್ಯ. ಇಂದು ಅನುಭಾವದ ಆತ್ಮವಿದ್ಯೆ ದೂರಸರಿಯುತ್ತ ನಡೆದಿದೆ. ಲೌಕಿಕ ಆಡಂಬರಗಳು ಅತಿಯಾಗುತ್ತಿವೆ. ಒಳಗು-ಬೆಳಗುಳ ಬದಲು ಹೊರಗು ಬೆಳಗುವವರೇ ತುಂಬಿದ್ದಾರೆ ಅರುಹಿನಿಂದ ಹಿರಿಯರಾಗುವುದನ್ನು ಮರೆತು, ಒಣ ಆಡಂಬರದಿಂದ ಹಿರಿಯರಾಗಲು ಬಹುಜನರು ಹೊರಟಿದ್ದಾರೆ. ಇವರಿಗಾಗಿ ಅಪ್ಪ ಬಸವಣ್ಣನವರು ಹೇಳುತ್ತಾರೆ.

ಆನೆಯ ನೇರಿಕೊಂಡು ಹೋದಿರೇ ನೀವು,
ಕುದುರೆಯ ನೇರಿಕೊಂಡು ಹೋದಿರೇ ನೀವು
ಕುಂಕುಮ ಕಸ್ತೂರಿ ಪೂಸಿಕೊಂಡು ಹೋದಿರೇ ಅಣ್ಣಾ ;

ಸತ್ಯದ ನಿಲುವ ನರಿಯದೇ ಹೋದಿರಲ್ಲ!
ಸದ್ಗುಣವೆಂಬ ಫಲವ ಬಿತ್ತದೆ, ಬೆಳೆಯದೇ ಹೋದಿರಲ್ಲ!
ಅಹಂಕಾರವೆಂಬ ಮದಗಜವನೇರಿ ವಿಧಿಗೆ ಗುರಿಯಾಗಿ ನೀವು ಹೋದಿರಲ್ಲ!
ನಮ್ಮ ಕೂಡಲ ಸಂಗಮ ದೇವರನು ಅರಿಯದೇ ನರಕಕ್ಕೆ ಭಾಜನವಾದಿರಲ್ಲ!

ಇಂಥ ಬಯಲಡಂಬಕರಿಗೆ ಇಂದು ಪೂಜ್ಯಶ್ರೀ ಶಿವಕುಮಾರ ಮಹಾಸ್ವಾಮಿಗಳ-ವರ ಬದುಕು ಒಂದು ಮಹಾನ್ ದಾರಿದೀಪವಾಗಿದೆ. ಸದಾ ಕಾಯಕ, ಸದಾ ಸರಳ ಜೀವನ, ಸದಾ ಅವ್ಯಕ್ತ ಸೇವೆ ನಿರಂತರ ದಾಸೋಹಗಳಿಂದ ಪೂಜ್ಯ ಮಹಾಸ್ವಾಮಿಜಿಗಳವರು ಕಣ್ಣೆದುರಿನ ಕೈಲಾಸವಾಗಿದ್ದಾರೆ. ಪೀಠಾರೋಹಣದ ನಿರಂತರ ಆರು ದಶಕ-ಗಳ ಅವರ ದುಡಿಮೆಯ ಫಲವಾಗಿ ಇಂದು ಸಿದ್ಧಗಂಗೆ ಪ್ರಪಂಚದಲ್ಲಿಯೇ ಅತ್ಯುನ್ನತ ಅಧ್ಯಾತ್ಮ ಶಿಕ್ಷಣ ಶಾಲೆಯಾಗಿ ತಲೆಯೆತ್ತಿ ನಿಂತಿದೆ. ಶ್ರೀ ಮಠದ ದಾಸೋಹದ ಪವಿತ್ರ ಪ್ರಸಾದ ಸ್ವೀಕರಿಸಿ, ಸಕಲ ಜಾತಿಮತಗಳ ವಿದ್ಯಾರ್ಥಿಗಳು ಇಂದು ಜಗತ್ತಿನಾದ್ಯಂತ ಪ್ರಸಾದ ಸಾಕ್ಷಿಯಾಗಿ ಬೆಳಗುತ್ತಿದ್ದಾರೆ. ಪೂಜ್ಯರು ಆರಂಭಿಸಿದ ನೂರಾರು ಶಿಕ್ಷಣ ಸೌಧಗಳು ಇಂದು ಪೂಜ್ಯರ ಚಿಂತನ ಚೈತ್ಯಾಲಯಕ್ಕೆ ಪ್ರಯೋಗ ಧಾಮವಾಗಿವೆ. ಇಂಥ ಘನಮಹಿಮರು ಇರುವದರಿಂದಲೇ ನಾಡು ಸರ್ವಾಂಗ ಸುಂದರವಾಗ-ಬಲ್ಲದು. ಪೂಜ್ಯರು ಧರಿಸಿದ ತ್ಯಾಗದ ಕುರುಹಾದ ಕಾವಿಯು ನಾಡಿನ ಮಠಾಧಿಪತಿಗಳಿಗೆಲ್ಲ ಒಂದು ಒಳ್ಳೆಯ ಮೌಲ್ಯವನ್ನು, ಬೆಲೆಯನ್ನು, ತಂದಿದೆ. ಇಂದು ದೇಶ ಏನಾದರೂ ಸಮಸ್ಯೆಗಳನ್ನು ಎದುರಿಸುತ್ತಲಿದ್ದರೆ, ಅದಕ್ಕೆ ಮುಖ್ಯ ಕಾರಣ ಇಂಥ ನಿಜಾನುಭಾವಿಗಳನ್ನು ಮರೆತುದೇ ಮುಖ್ಯ ಕಾರಣವಾಗಿದೆ.

ಬಸವ ಎಂದೊಡೆ ಅಸಾಧ್ಯ ಸಾಧ್ಯವಪ್ಪದು, ಅಭೇದ್ಯ ಭೇದ್ಯವಪ್ಪದು ಎಂದು ಶರಣರು ಸಾರಿದ ಅನುಭಾವದ ನುಡಿಯನ್ನು ಪೂಜ್ಯ ಶ್ರೀಗಳವರು ನಡೆಗೆ ತಂದು ಅತ್ಯಂತ ಧೈರ್ಯವಾಗಿ ಮುನ್ನಡೆದರು. ಬದುಕಿನಲ್ಲಿ ಅದೆಂಥ ದುಗುಡ - ದುಮ್ಮಾನಗಳು ಬಂದೆರಗಿದರೂ ಬಸವ ನಿಷ್ಠೆಯನ್ನು ವ್ಯೆಗೊಡಿಸಿ ಕೊಂಡು ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಕೆಚ್ಚೆದೆಯಿಂದ, ಮುನ್ನುಗ್ಗಿದರು. ಬಂದೊದಗುವ ಆಪತ್ತು - ವಿಪತ್ತುಗಳನ್ನು ಸದಾ ಹಸನ್ಮುಖರಾಗಿ ಬಸವ ಸ್ಮರಣೆಯಲ್ಲಿ ಪ್ರಸಾದ - ಹಸಾದವೆಂದು ತಮ್ಮ ಬಲದ ತೇಜದಿಂದ ಬೆಳಗಿದವರು. ಬಸವಾದಿ ಶರಣರ ಅನುಭಾವ ಆಶ್ರಯದಲ್ಲಿ ಪ್ರತಿಯೊಬ್ಬರು ಬದುಕುವದನ್ನು ಕಲಿಯಬೇಕು. ಲಿಂಗಾನುಭವ ಪಡೆದು, ಸಂತೃಪ್ತಿಯ ಶರಣ ಜೀವನವನ್ನು ಸಾಗಿಸಬೇಕು.

ಅರುವಿನ ತೃಪ್ತಿಗೆ ಅನುಭಾವವೇ ಆಶ್ರಯ
ಲಿಂಗಾನುಭಾವದಿಂದ ನಿಮ್ಮ ಕಂಡು ಎನ್ನ ಮರೆದೆ
ಕೂಡಲ ಸಂಗಮದೇವ

ವೈಜ್ಞಾನಿಕ ಯುಗದ ಇಂದಿನ ಮಾನವನು ಕೇವಲ ಬಹಿರಂಗದ ಭೋಗದ ಬೆನ್ನುಹತ್ತಿ, ಬಾಳಿಸಲ್ಲಿ ಸಮಾಧಾನ, ಶಾಂತಿ, ಸೈರಣೆ, ಸಂತೃಪ್ತಿಯನ್ನು ಕಳೆದುಕೊಳ್ಳುತ್ತಲಿದ್ದಾನೆ. ಈ ಅನಾಹುತದಿಂದ ಪಾರಾಗಬೇಕಾದರೆ ಮಾನವನು ಮಹಾಮಾನವತಾವಾದಿ ಅಪ್ಪ ಬಸವಣ್ಣನವರ ಆಶ್ರಯ ಪಡೆಯಬೇಕು. ತನ್ನ ಅಂತರಂಗದೊಳಗೆ ಶಿವನಿಹನು ಎಂಬುದನ್ನು ಮರೆತು, ಎಲ್ಲೆಲ್ಲಿಯೋ ಅಲೆದಾಡುತ್ತಿದ್ದಾನೆ. "ಮಣ್ಣು ಬಿಟ್ಟು ಮಡಕೆ ಇಲ್ಲ. ತನ್ನ ಬಿಟ್ಟು ದೇವರಿಲ್ಲ" ಎಂಬ ಸತ್ಯ ತತ್ವ ಇಂದು ಮಾನವನಿಗೆ ತಿಳಿಯಲಾಗಿದೆ. ಈ ಸತ್ಯವನ್ನು ಅರಿತುಕೊಳ್ಳದೆ ಮೂಢನಾಗಿ ಗುಡಿ-ಗುಂಡಾರಗಳು ತೀರ್ಥಕ್ಷೇತ್ರಗಳನ್ನು ಅರಸಿಕೊಂಡು ಬಳಲುತ್ತಿದ್ಧಾನೆ. ನಿರಂಜನ ಶರಣ ಜಂಗಮ ವಿಭು ಅಲ್ಲಮ ಪ್ರಭುದೇವರು ಎಚ್ಚರಿಸುತ್ತಾರೆ.

ಸುತ್ತಿ ಸುತ್ತಿ ಬಂದಡಿಲ್ಲ
ಲಕ್ಷ ಗಂಗೆಯ ಮಿಂದಡಿಲ್ಲ
ತುಟ್ಟ ತುದಿಯ ಮೇರು ಗಿರಿಯ ಮೆಟ್ಟ ಕೂಗಿದಡಿಲ್ಲ
ನಿತ್ಯ ನೇಮದಿಂದ ತನುವ ಮುಟ್ಟ ಕೊಂಡಡಿಲ್ಲ
ನಿಚ್ಚಕ್ಕೆ ನಿಚ್ಚ ನೆನೆವ ಮನವ
ಅಂದಂದಿಗೆ ಅತ್ತ ಲಿತ್ತ ಹರಿವ ಮನವ
ಚಿತ್ತದಲ್ಲಿ ನಿಲ್ಲಿಸಬಲ್ಲಡೆ
ಬಚ್ಚ ಬರಿಯ ಬೆಳಗು ಗುಹೇಶ್ವರ ಲಿಂಗವು

ಮಹಾಬೆಳಗಿನ ಸ್ವರೂಪದಲ್ಲಿರುವ ಮಹಾಲಿಂಗ ಚೇತನವು ನಮ್ಮೆಲ್ಲರ ಅಂತರಂಗದಲ್ಲಿದೆ. ಅದುವೆ ಅನುಭಾವಿ ಶರಣರ ಕರುಣೆಯಿಂದ ಇಷ್ಟಲಿಂಗವಾಗಿ ಪ್ರತಿಯೊಬ್ಬರ ಕರ-ಸ್ಥಲದಲ್ಲಿ ಬಂದಿದೆ. ಅಪ್ಪ ಬಸವಣ್ಣನವರು ಈ ಲಿಂಗಾನುಭವವನ್ನು ನಮಗೆ ಅರುಹಿದ್ದಾರೆ.

ಜಗದಗಲ ಮುಗಿಲಗಲ ಮಿಗೆಯಗೆಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ !
ಅಗಮ್ಯ ಅಗೋಚರ ಅಪ್ರತಿಮ ಲಿಂಗವೇ
ಕೂಡಲಸಂಗಮದೇವಾ
ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ

ಇಂತಹ ಸ್ವಾನುಭವ ದೇವರನ್ನು ಮರೆತು ಲಿಂಗವಂತರು ಕಲ್ಲು, ಮಣ್ಣು, ಹಿತ್ತಾಳೆ, ಕಂಚು, ಗುಡಿ, ಗುಂಡಾರ, ಸ್ಥಾವರಾದಿಗಳನ್ನು ದೇವರೆಂದು ಪೂಜಿಸುವ

ಮೌಢ್ಯ ನೋಡಿದಾಗ, ಮಂಗನ ಕೈಯಲ್ಲಿ ಮಾಣಿಕ್ಯವಿದ್ದಂತೆ ಪರಿಸ್ಥಿತಿಯಾಗಿದೆ. ಅನುಭಾವಿ ಶರಣರು ಎಚ್ಚರಿಸುತ್ತಾರೆ.

ಕಲ್ಲ ದೇವರು ದೇವರಲ್ಲ, ಮಣ್ಣದೇವರು ದೇವರಲ್ಲ.
ಮರ ದೇವರು ದೇವರಲ್ಲ,
ಪಂಚಲೋಹದಲ್ಲಿ ಮಾಡಿದ ದೇವರು ದೇವರಲ್ಲ,
ಸೇತು ರಾಮೇಶ್ವರ ಗೋಕರ್ಣ, ಕಾಶಿ, ಕೇದಾರ ಮೊದಲಾದ
ಅಷ್ಟಾಷಷ್ಟಿಕೋಟಿ ಪುಣ್ಯ ಕ್ಷೇತ್ರಗಳಲ್ಲಿಹ
ದೇವರು ದೇವರಲ್ಲ.
ತನ್ನ ತಾನರಿದು ತಾನಾರೆಂದು ತಿಳಿದಡೆ
ತಾನೆ ದೇವನೋಡಾ ಅಪ್ರಮಾಣ ಕೂಡಲಸಂಗಮದೇವಾ.

ಈ ರೀತಿಯಾಗಿ ಬಸವಾದಿ ಶರಣರು ಮಾನವದೇವತ್ವವನ್ನು ಸಾಧಿಸಿ ತೋರಿದ ಅನುಭಾವವೇ ಲಿಂಗಾನುಭವ, ಶಿವಾನುಭಾವವಾಗಿದೆ. ಶಿವ ಎಂದರೆ ಮಂಗಲಾತ್ಮಕ ಚೇತನ.

ಇಂತಪ್ಪ ಲಿಂಗಾನುಭವ ಹೊಂದಿದ ಅನುಭಾವಿಯ ಮಾತೆಂಬುದು ಜ್ಯೋತಿರ್ಲಿಂಗ, ಸ್ವರವೆಂಬುದು ಪರತತ್ವ; ಅದುವೇ ಅನುಭಾವದ ಬೆಳಕಿನ ಕಿರಣಗಳು, ಈ ಲಿಂಗನುಡಿಗಳೇ ವಚನಗಳು.

ಬಸವಾದಿ ಶರಣರ ವಚನಗಳಲ್ಲಿ ಅರಿವು-ಆಚಾರ-ಅನುಭಾವಗಳ ತ್ರಿವೇಣಿ ಸಂಗಮವಿದೆ, ಈ ಅನುಭಾವ ಸರಸಿಯಲ್ಲಿ ಮಿಂದವರೇ ಧನ್ಯರು. ಆದ್ದರಿಂದಲೇ ನಮ್ಮ ಬಸವ ಪರಂಪರೆಯ ಅನುಭಾವಿ ಜಂಗಮ ಜ್ಯೋತಿಗಳಾದ ಪೂಜ್ಯ ಶ್ರೀ ವಿಜಯ ಮಹಾಂತ ಶಿವಯೋಗಿಗಳು, ಅಥಣಿಯ ಶ್ರೀ ಮುರುಘೇಂದ್ರ ಶಿವಯೋಗಿಗಳು, ಹಾಲ್ಕಿ ಮಹಾಂತ ಶಿವಯೋಗಿಗಳು, ಮೈಲಾರ ಬಸವಲಿಂಗ ಶರಣರು ಬಾಲಲೀಲಾ ಮಹಾ ಶಿವಯೋಗಿಗಳು ಮುಂತಾದ ಪೂಜ್ಯರು ಧರ್ಮಪಿತ ಬಸವಣ್ಣನವರ ವಚನಗಳನ್ನು "ಅಪ್ಪನವರ ವಚನಗಳು" ಎಂದು ಭಕ್ತಿಭಾವದಿಂದ-ಮಂತ್ರಸ್ವರೂಪವಾಗಿ ಪಠಣ ಮಾಡುತ್ತಿದ್ದರೆಂದು ಕೇಳುತ್ತೇವೆ.

ಷಟಸ್ಥಲ ಜ್ಞಾನಿ ಚನ್ನಬಸವಣ್ಣನವರು-ಅನುಭಾವದ ಮಹತ್ವವನ್ನು ಕುರಿತು ನಮಗೆ ತಿಳಿ ಹೇಳುತ್ತಾರೆ.

ಮಂಡೆ ಮಾಸಿದರೆ ಮಹಾಮಜ್ಜನವ ಮಾಡುವದು
ವಸ್ತ್ರ ಮಾಸಿದೊಡೆ ಮಡಿವಾಳಂಗಿಕ್ಕುವದು

ಮನದ ಮೈಲಿಗೆ ತೊಳೆಯಬೇಕಾದರೆ
ಕೂಡಲ ಚನ್ನಸಂಗಯ್ಯನ ಅನುಭಾವವ ಮಾಡುವದು

ಆದ್ದರಿಂದ ಶರಣೆ ಮುಕ್ತಾಯಕ್ಕನವರ ಕರೆಯನ್ನು ಎಲ್ಲರೂ ಕೇಳಬೇಕಾಗಿದೆ.

ಸುಮ್ಮನೇಕೆ ದಿನ ಕಳೆವಿರಿ
ಸುಮ್ಮನೇಕೆ ಹೊತ್ತುಗಳೆವಿರಿ ?
ಸುಮ್ಮನೇಕೆ ಹೊತ್ತುಗಳೆವಿರಿ ಸ್ವಾಮಿಗಳಿರಾ ?
ಮಾಡಬನ್ನಿ ದಿನ ಶಿವರಾತ್ರಿಯ
ಕೇಳಬನ್ನಿ ಶಿವಾನುಭವವ
ನೋಡಬನ್ನಿ ಅಜಗಣ್ಣನಿರವ ಬಸವಣ್ಣ ತಂದೆ

ಇಂತಹ ಶಿವಾನುಭವಕ್ಕಾಗಿ ನಾವೆಲ್ಲ ಹಂಬಲಿಸಬೇಕಾಗಿದೆ. "ಹಿತ್ತಲ ಗಿಡ ಮದ್ದಲ್ಲ" ಎನ್ನುವಂತೆ ಇಂದು ಅನೇಕರು ವಚನಗಳ ಅಧ್ಯಯನ ಚಿಂತನಕ್ಕೆ ಮನಸ್ಸು ಮಾಡದೇ ಬೇರೆ ಬಾವಿಯ ತೋಡಿ ಉಪ್ಪು ನೀರನುಂಬುವನ ವಿಧಿಯಂತೆ ಹತ್ತು ದಿಕ್ಕಿಗೆ ಹರಿದು ಚಂಚಲರಾಗಿ ತಿರುಗುತ್ತಿರುವದನ್ನು ಕಂಡಾಗ ಮರುಕವೆನಿಸುತ್ತದೆ.

ಇಡೀ ಪ್ರಪಂಚಕ್ಕೆ ವಿನೂತನವಾದ ಧರ್ಮ- ಸಾಹಿತ್ಯ- ಸಂಸ್ಕೃತಿಯನ್ನು ಬಸವಾದಿ ಶರಣರು ನೀಡಿರುವುದನ್ನು ನಾವು ಅರಿತು-ಆಚರಿಸಬೇಕಾಗಿದೆ. ನಮ್ಮ ಬಾಳಿನಲ್ಲಿಯ ನೂರೆಂಟು ಮೂಢನಂಬಿಕೆಗಳು, ಅನಾಚಾರ-ದುರಾಚಾರಗಳು ದೂರಾಗಬೇಕು. ಅಂದರೆ ಮಾತ್ರ ಲಿಂಗಾನುಭಾವ ಸಾಧ್ಯ

**ಈ ಮೂಢ ನಂಬಿಕೆಗಳು** ಯಾವಾಗಲೂ ಭಯ, ಭೀತಿ, ಆಶ್ಚರ್ಯ- ಸ್ವಾರ್ಥಬುದ್ಧಿ, ಅಜ್ಞಾನ ಮೌಢ್ಯಗಳ ಮೇಲೆಯೇ ಆಧಾರಿತವಾಗಿರುತ್ತವೆ. ವ್ರತ ನೇಮಗಳು, ದೇವರ, ಮಹಾತ್ಮರ ಹೆಸರಿನಲ್ಲಿ ಮಾಡುವ ನಿರರ್ಥಕ. ದುಂದ ವೆಚ್ಚಗಳು, ದೈವದ ಅಭಿಷೇಕಾದಿ ಮೌಢ್ಯಕ್ರಿಯೆಗಳು, ದೀಪೋತ್ಸವ-ಸಹಸ್ರದೀಪೋತ್ಸವ-ಲಕ್ಷ ದೀಪೋತ್ಸವಗಳಂತಹ ಅಮಾನವೀಯ ಮೂಢ ಆಚಾರಗಳು ನಿಲ್ಲಬೇಕೆಂದು ಬಸವಾದಿ ಶರಣರು ಎಚ್ಚರಿಸುತ್ತಾರೆ.

ಹಾಲ ನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ,
ಕಡಲೆಯ ನೇಮವ ಹಿಡಿದಾತ ಕುದುರೆಯಾಗಿ ಹುಟ್ಟುವ,
ಅಗ್ಗವಣೆಯ ನೇಮದಾತ ಕಪ್ಪೆಯಾಗಿ ಹುಟ್ಟುವ,
ಪುಷ್ಪವ ನೇಮವ ಹಿಡಿದಾತ ತುಂಬಿಯಾಗಿ ಹುಟ್ಟುವ
ಇವು ಷಟ್‌ಸ್ಥಲಕ್ಕೆ ಹೊರಗು
ಭಕ್ತಿ ನಿಷ್ಠೆಯಿಲ್ಲದವರ ಕಂಡರೆ ಮೆಚ್ಚ ಗುಹೇಶ್ವರಾ.

ದೇವರು-ದಿಂಡರು. ಸ್ಥಾವರ ಗುಡಿ-ಗದ್ದುಗೆ- ಮೂರ್ತಿಗಳ ಹೆಸರಿನಲ್ಲಿ ತುಪ್ಪದ ದೀಪ, ನಂದಾ-ದೀವಿಗೆ ಉರಿಸುವುದನ್ನಾಗಲಿ, ಅಪ್ಯಾಯನ ಪ್ರಸಾದ ಕೆಡಿಸುವದನ್ನಾಗಲಿ ಶರಣರು ಕಠೋರವಾಗಿ ಖಂಡಿಸುತ್ತಾರೆ. ಇಂದು ದೇಶದಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಬರಿಹೊಟ್ಟೆಯಲ್ಲಿದ್ದು, ತುತ್ತು ಅನ್ನಕ್ಕಾಗಿ ಪರದಾಡುತ್ತಿರುವಾಗ, ಹಸಿದವರ ಜಠರಾಗ್ನಿ ಸೇರಬೇಕಾದ ಅಜ್ಯ ಬೆಂಕಿಗೆ ಸೇರುವದನ್ನು ಶರಣರು ಸಹಿಸಲಿಲ್ಲ.

ಕಿಚ್ಚು ದೈವವೆಂಬ ಹವಿಯನ್ನಿಕ್ಕುವವರ ಮನೆಯಲ್ಲಿ ಕಿಚ್ಚೆದ್ದು ಸುಡುವಾಗ ಬಚ್ಚಲ ನೀರು ಬೀದಿಯಮಣ್ಣು ತಂದು ಸುರುವುವಾಗ ನಿಮ್ಮ ದೇವರು ದೊಡ್ಡ-ಪ್ರಮಾಣದಲ್ಲಿ ಪ್ರತ್ಯಕ್ಷನಾಗಿದ್ದಾನೆಂದು ಏಕೆ ಭಾವಿಸಬಾರದು ? ಎಂದು ವಿಡಂಬಿಸುತ್ತಾರೆ ದೀಪೋತ್ಸವಗಳ ಹೆಸರಿನಲ್ಲಿ ಇಡೀ ದೇಶದಲ್ಲಿ ಸಾವಿರಾರು ಟನ್ ತೈಲ ಸುಡುವ ಅಜ್ಞಾನ ನಿಲ್ಲಬೇಕು. ರೊಟ್ಟಿ ಚಟ್ನಿ ಖಾರಕ್ಕೆ ಒಂದು ಹನಿ ಎಣ್ಣೀ ಸಿಗದೇ ಪರದಾಡುವ ಕೋಟಿ ಕೋಟಿ ದರಿದ್ರಾವಸ್ಥೆಯ ದೀನ-ದುಃಖ-ದಲಿತರನ್ನು ಕಂಡೂ ಕಂಡೂ ನಮ್ಮ ಹೃದಯ ಕರಗುತ್ತಿಲ್ಲ. ಅವರುಗಳ ಬೆವರಿನ ಮೇಲೆ ಅಟ್ಟಹಾಸದ ಆಡಂಬರ ನಡೆಯುವುದನ್ನು ಬಸವಾದಿ ಶರಣರು ಸಹಿಸಲಿಲ್ಲ

ಇಂದು ಬಸವಾದಿ ಶರಣರ ಹೆಸರಿನಿಂದ, ಅವರ ಹೆಸರು ಹೇಳಿಕೊಳ್ಳುತ್ತಲೇ ಸೇವೆಯ ಸೋಗಿನಲ್ಲಿ ಧಾರ್ಮಿಕ-ಸಾಮಾಜಿಕ-ಶೈಕ್ಷಣಿಕ ಶೋಷಣೆ ನಡೆಯುತ್ತಿರುವದು ನಿಲ್ಲಬೇಕಾಗಿದೆ.

**ಇಡೀ ಮನುಕುಲ ಒಂದು,** ಮಾನವರೆಲ್ಲ ದೇವರ ಮಕ್ಕಳು. ಸಕಲ ಜೀವರಾಶಿಗಳಿಗೆ ಲೇಸನ್ನೇ ಬಯಸುವ ಕಾರ್ಯ ನಡೆಯಬೇಕಿದೆ. ಇಂದಿಗೂ ಸ್ಪೃಶ್ಯ, ಅಸ್ಪೃಶ್ಯರ ಉದ್ಧಾರದ ಹೆಸರಿನಲ್ಲಿ ಶೋಷಣೆಯೇ ನಡೆಯುತ್ತಿದೆ ಅವರನ್ನು ನಮ್ಮವರು, ಅಪ್ಪ-ಬೊಪ್ಪ ಎಂದು ಅಪ್ಪಿಕೊಳ್ಳುವ ಕಾರ್ಯ ನಡೆಯಬೇಕಿದೆ. ಕನಿಷ್ಟ ಪಕ್ಷ ಬಸವಣ್ಣ-ಅಲ್ಲಮಪ್ರಭು-ಸಿದ್ಧರಾಮ - ಚನ್ನಬಸವಣ್ಣ ಮುಂತಾದ ಮುಂತಾದ ಶರಣರ ವಾರಸುದಾರರೆಂದು ಹೇಳಿಕೊಳ್ಳುವ ನಾವಾದರೂ ಈ ದಿಸೆಯಲ್ಲಿ ಕಾರ್ಯ ಮಾಡಬೇಕಿದೆ,

ಅಪ್ಪನು ನಮ್ಮ ಮಾದಾರ ಚನ್ನಯ್ಯ,
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ,

ಎಂದು ಮುಂತಾಗಿ ಬಸವಾದಿ ಶರಣರ ವಚನಗಳನ್ನು ಸಭೆ ಸಮಾರಂಭಗಳಲ್ಲಿ ಢಾಣಾಡಂಗುರವಾಗಿ ಸಾರುವ ಅನೇಕ ದೊಡ್ಡವರು, ಇಂದು ನಾವು ನಮ್ಮ ದೀನ-ದಲಿತ-ಅಸ್ಪೃಶ್ಯ ಬಂಧುಗಳನ್ನು ನಮ್ಮವರೆದು ಅಪ್ಪಿಕೊಂಡು ಅವರಿಗೆ ಸಂಸ್ಕಾರ

ನೀಡುತ್ತಾ, ಅವರಲ್ಲಿ ಪೂಜ್ಯ-ಪ್ರಸಾದ ಸ್ವೀಕರಿಸುವ ಪ್ರಮಾಣಿಕ ಪ್ರಯತ್ನ ಪ್ರಾರಂಭಿಸಿದಾಗ, ಅದನ್ನೇ ಅಪಹಾಸ್ಯವಾಗಿ ಮಾತನಾಡುವ ಹಿರಿಯರೆನ್ನುವವರನ್ನು ಕಾಣುತ್ತಿದ್ದೇವೆ. ನುಡಿಯಲ್ಲಿ ಎಚ್ಚೆತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ಪ ಲಿಂಗ ಘಟಸರ್ಪ ನೋಡ ಎಂಬುದನ್ನು ಮರೆಯಬಾರದು.

ಇಂದು ಬಸವಾದಿ ಶರಣರ ಹೆಸರು ಹೇಳಿಕೊಂಡು, ಅವರ ವಚನ ಸಾಹಿತ್ಯವನ್ನು ವಿಪುಲವಾಗಿ ಬಳಸಿಕೊಂಡು ಬೆಳೆದಿರುವ ಕೆಲವರು ಇತ್ತೀಚೆಗೆ ಬಸವಾದಿ ಪ್ರಮಥರ ಚಾರಿತ್ರ್ಯಕ್ಕೆ ಕಲಂಕ ತರುವ ಕೆಲಸವನ್ನು, ಕೆಲವರು ನೇರವಾಗಿ, ಇನ್ನು ಕೆಲವರು ಹಿಂದಿನಿಂದ ಪರೋಕ್ಷವಾಗಿ ಮಾಡುತ್ತಿದ್ದಾರೆ. ಬೆಕ್ಕು ಕಣ್ಣು ಮುಚ್ಚಿ-ಹಾಲು ಕುಡಿದರೆ ಯಾರೂ ಕಂಡಿಲ್ಲ ಎಂದು ಭಾವಿಸುವಂತೆ ಇಂಥವರು ವರ್ತಿಸುತ್ತಿದ್ದಾರೆ. ಬಸವಾದಿ ಶರಣರ ನಿಂದೆ-ಟೀಕೆ-ಅವಹೇಳನ ಅವರು ಯಾರೇ ಮಾಡಲಿ ಮಾಡಿರಲಿ ಅದು ಹೇಯಕೆಲಸ, ಇದನ್ನು ನಾವು ಖಂಡಿಸುತ್ತೇವೆ.

ಹನ್ನೆರಡನೆಯ ಶತಮಾನದ ಅಲ್ಲಮಪ್ರಭುದೇವರಿಂದ ಹಿಡಿದು ತೋಂಟದ ಸಿದ್ಧಲಿಂಗ ಶಿವಯೋಗಿಗಳು, ಷಣ್ಮುಖ ಶಿವಯೋಗಿಗಳು, ಮೈಲಾರ ಬಸವಲಿಂಗ ಶರಣರು, ಬಾಲಲೀಲಾ ಮಹಾಂತ ಶಿವಯೋಗಿಗಳು, ಘನಮಠ ಶಿವಯೋಗಿಗಳು, ಅಥಣಿ ಶಿವಯೋಗಿಗಳು, ವಿಜಯ ಮಹಾಂತ ಶಿವಯೋಗಿಗಳು, ವಚನ ಪಿತಾಮಹ ಫ. ಗು. ಹಳಕಟ್ಟಿ ಶರಣರು, ನಿರಂಜನ ಶರಣ ಹರ್ಡೇಕರ ಮಂಜಪ್ಪನವರು ಮುಂತಾದ ಪೂಜ್ಯರೆಲ್ಲ "ಅಪ್ಪ ಬಸವಣ್ಣನವರನ್ನು ಧರ್ಮ ಗುರುವೆಂದು, ವಿಶ್ವ ಗುರುವೆಂದು, ಪೂರ್ವಾಚಾರಿ, ಪ್ರಥಮಾಚಾರ್ಯ, ಲಿಂಗಾಚಾರ್ಯ ಜಂಗಮಾಚಾರ್ಯನೆಂದು ಅಷ್ಟೇ ಏಕೆ **ಶಿವನೇ ಬಸವ ಬಸವಾ ಶಿವನೇ** ಎಂದು "ಶಿವಬಸವ" ನೆಂದು ಎದೆತುಂಬಿ ಸ್ತುತಿಸಿದ್ದಾರೆ,

ಬಸವಾದಿ ಶರಣ-ಶರಣೆಯರ ವಚನಗಳೇ ನಮಗೆ ಮಂತ್ರ ಸ್ವರೂಪ. ಪ್ರಾಣ ಸ್ವರೂಪ ಮಾತೃ ಸ್ವರೂಪವಾಗಿರುವಾಗ ಬೇರೆ ಭಾವಿಯ ತೋಡಿ ಉಪ್ಪು ನೀರ ನುಂಬುವನ ವಿಧಿಯಂತೆನಮ್ಮ ಗತಿಯಾಗಬಾರದು. ಇನ್ನಾದರೂ ಎಚ್ಚೆತ್ತುಕೊಳ್ಳೋಣ. ಇಡೀ ವಿಶ್ವದಲ್ಲಿಯೇ ವಿನೂತನವಾಗಿರುವ ಮಾನವೀಯ ಮೌಲ್ಯಗಳಿಂದ ಕೂಡಿದ ಬಸವ ತಂದೆಯ ಧರ್ಮ-ಸಾಹಿತ್ಯ-ಸಂಸ್ಕೃತಿ ಪರಂಪರೆಯ ಜನ ನಾವೆಂದು ತಲೆ ಎತ್ತಿ ಬದುಕುವದನ್ನು ಕಲಿಯಬೇಕಾಗಿದೆ.

**ಪ್ರಪಂಚಕ್ಕೆ ಕಾಯಕ-ದಾಸೋಹ-ಪ್ರಸಾದ** ಸಂದೇಶ, ಕಾಣಿಕೆ ನೀಡಿದ ನಮ್ಮ ಸಮಾಜದಲ್ಲಿ ಭಿಕ್ಷೆಬೇಡುವ ಜನ ಇರಬಾರದು. ಕಾಯಕಷ್ಟ ಮಾಡಿ ದುಡಿದು ಕಾಯಕದಿಂದ ಬಾಳುವೆವೆಂಬ ಧೀಮಂತ ಜನ. ಸ್ವಾಭಿಮಾನಿ ಸ್ವಾವಲಂಬಿ ಜನ-ನಿರ್ಮಾಣವಾಗಬೇಕು

ಎಲ್ಲಿಯೋ ಒಂದೋ-ಎರಡೋ ಸಿಗಬಹುದಾದ ಸರಕಾರಿ-ಸೌಲಭ್ಯಗಳಿಗಾಗಿ ಧರ್ಮ-ಸಂಸ್ಕೃತಿ ಮರೆತು ಹಿಂದುಳಿದವರೆಂದು ಕರೆದುಕೊಳ್ಳಲು ಹಂಬಲಿಸದೇ, ಇಂದು ಲಕ್ಷಾವಧಿ-ಕೋಟಿ-ಕೋಟಿ ಸಂಪತ್ತುಳ್ಳ ಮಠ ಪೀಠಾಧಿಪತಿಗಳು, ಶ್ರೀಮಂತ ವ್ಯಾಪಾ-ರಸ್ಥರು, ವಾಣಿಜ್ಯೋದ್ಯಮಿಗಳು, ಧನಿಕ ಜಮೀನುದಾರರು ಮುಂದೆ ಬಂದು ಪ್ರತಿ-ಯೊಂದು ಜಿಲ್ಲೆ-ತಾಲೂಕು-ಊರುಗಳಲ್ಲಿ ಕಾಯಕದ ಯೋಜನೆಗಳನ್ನು ರೂಪಿಸಿ ನಿರುದ್ಯೋಗಿ ಬಡಯುವಕರಿಗೆ ಸ್ವಯಂ-ಉದ್ಯೋಗ ಅವಕಾಶಗಳನ್ನು ಕಲ್ಪಿಸುವತ್ತ ಮನಸ್ಸು ಮಾಡಬೇಕು. ಶೀಘ್ರವಾಗಿ ಕಾರ್ಯಕೈಕೊಳ್ಳಬೇಕು. ಬಸವಾದಿ ಶರಣರು ಕಲ್ಪಿಸಿ-ರೂಢಿಸಿದ ನೂರಾರು ಕಾಯಕಗಳ ಉದಾಹರಣೆ ನಮ್ಮ ಮುಂದೆ ಇದೆ. ಅದನ್ನು ಇಂದಿನ ಆಧುನಿಕ ಜೀವನ-ಕಲ್ಯಾಣಕ್ಕೆ ತಕ್ಕಂತೆ ಬಳಸಿಕೊಳುವ ಯೋಜನೆಗಳನ್ನು ಹಮ್ಮಿಕೊಳ್ಳುವತ್ತ ಮನಸ್ಸು ಮಾಡಬೇಕು.

ಬಸವಾದಿಶರಣರ-ಧರ್ಮಸಮಾಜದವರೆಂದು ಹೇಳಿಕೊಳ್ಳುವ ನಮ್ಮಲ್ಲಿ ಅಯ್ಯ-ನವರು, ಪಂಚಮಸಾಲಿ, ಬಣಜಿಗರು, ಗಾಣಿಗರು, ರೆಡ್ಡಿ, ನೇಕಾರ, ಶಿವಸಿಂಪಿಗ, ಹೂಗಾರ, ಕುಂಬಾರ, ಮಡಿವಾಳ, ಹಡಪಿಗ, ಡೋಹರ, ಸಮಗಾರ, ನೊಣಬ, ಗೌಡಸಾದರ, ಬಡಿಗ, ಒಕ್ಕಲಿಗ, ತೋಟಗೇರ, ಇನ್ನೂ ಮುಂತಾದ ನೂರಾರು ಒಳಪಂಗಡಗಳನ್ನು ಕಲ್ಪಿಸಿಕೊಂಡು ಮೇಲು ಕೀಳು ಎಂದು ಬಡಿದಾಡುವದು ನಿಲ್ಲಬೇಕಿದೆ. ಅಂಗದ ಮೇಲೆ ಇಷ್ಟಲಿಂಗ ಧರಿಸುವ “ನಾವೆಲ್ಲರೂ ಲಿಂಗವಂತರು” ಎಂಬ ಭಾವನೆಗಟ್ಟಿಗೊಳ್ಳಬೇಕು. **ಲಿಂಗವಂತರಲ್ಲಿ ಒಳಪಂಗಡ ಭೇದವೆಣಿಸದೇ ಮದುವೆ ಕಲ್ಯಾಣಗಳು ಪ್ರಾರಂಭವಾಗಬೇಕು.** ಸತ್ಯ-ಶುದ್ಧ-ಕಾಯಕದ ಜೀವನ ನಮ್ಮದಾಗಬೇಕು.

ಈದಿಸೆಯಲ್ಲಿ ಸಮಾಜಕ್ಕೆ ಮಠಾಧೀಶರು ಮಾರ್ಗದರ್ಶಕರಾಗಬೇಕಿದೆ. ಸಮಾಜ ತಪ್ಪಿದಲ್ಲಿ ಮಠಾಧಿಪತಿಗಳು ತಿದ್ದಬೇಕು, ಮಠಾಧಿಪತಿಗಳು ಕರ್ತವ್ಯ ವಿಮುಖರಾದಾಗ ಸಮಾಜ ಜಾಗೃತರಾಗಿ ಎಚ್ಚರಿಸಬೇಕು.

ಒಟ್ಟನಲ್ಲಿ, ಬಸವಾದಿಶರಣರ ಶಿವಾನುಭವ ಎಂದರೆ ಅದು ಕೇವಲ ಜೀವನ ಪಲಾಯನವಾದವಲ್ಲ. ಲೋಕಾನು ಭವವನ್ನೇ ಶಿವಾನುಭವವನ್ನಾಗಿ ಪರಿವರ್ತಿಸಿ-ಕೊಂಡು, ಅಂತರಂಗ-ಬಹಿರಂಗವೆಂಬ ಭೇದವಿಲ್ಲದೆ ಸುಂದರ-ಸಮನ್ವಯ-ಸಮರಸದ-ಅರಿವು-ಆಚಾರ-ಅನುಭಾವದ ಬದುಕಾಗಿದೆ, ಇಂತಹ ಅನುಭವದ ಬದುಕು ನಮ್ಮದಾಗಲಿ.

ಈ ನಿಟ್ಟಿನಲ್ಲಿ ಇಂದಿನ ಈ ಮಹಾನ್ ಸಮಾರಂಭ ಶ್ರೀ ಶಿವಕುಮಾರ ಅಪ್ಪಗಳವರ ಜೀವನ ಮಹಾಕಾವ್ಯದ ಮಹಾಸ್ಮರಣೆಯಾಗಲಿ. ಅವರ ಚೇತನ ಪ್ರಭೆಯಾಗಿ, ಶ್ರೀ ಸಿದ್ಧಗಂಗಾ ಶ್ರೀ ಭಾರತದ ಶ್ರೀಯಾಗಲಿ, ವಿಶ್ವ ಶ್ರೀಯಾಗಲಿ ಇಂದು ಮಾನವೀಯ ಸೇವೆಗೆ ಸಂದ ಗೌರವ ಇವರ ಗೌರವವಾಗಿದೆ. ನಾವು ವಿಶ್ವ ಮಾನವರಾಗಿ, ಶರಣರಾಗಿ, ಕಾಯಕ ಯೋಗಿಗಳಾಗಿ ಬದುಕುವುದೇ ಪೂಜ್ಯ ಪಾದರಿಗೆ ಸಲ್ಲಿಸ ಬೇಕಾದ ನಿರಂತರ ದಕ್ಷಿಣೆಯಾಗಿದೆ. ಇಂದಿನ ಈ ಸಮಸ್ತ ಮಹಾನ್ ಸಭೆ, ಪೂಜ್ಯರ ಪ್ರಭಾವಳಯದ ಅಂಗಳದಲ್ಲಿ ಸೇರಿರುವುದು ಅರ್ಥ ಪೂರ್ಣವಾಗಿದೆ. ಪೂಜ್ಯರು ಇನ್ನೂ ಹಲವಾರು ದಶಕ ನಮ್ಮೆದುರಿಗೆ ಇರಲಿ, ನಾಡಿಗೆ ಮಹಾನ್ ಸಂದೇಶವಾಗಿ ಶರಣ ಸಾಕ್ಷಿಯಾಗಿ ಬೆಳಗಲಿ ಎಂದ ಹಾರೈಸಿ ಅಪ್ಪ ಬಸವಣ್ಣನವರ ಕರುಣೆ ತಮ್ಮ ಮೇಲಿರಲಿ

**ಎಲ್ಲರಿಗೂ ಶರಣುಗಳು.**

---

**—ಪೂರ್ವಾಚಾರಿ ಬಸವಣ್ಣನವರು—**

ಆಯತದಲ್ಲಿ ಪೂರ್ವಾಚಾರಿಯ ಕಂಡೆ,
ಸ್ವಾಯತದಲ್ಲಿ ಪೂರ್ವಾಚಾರಿಯ ಕಂಡೆ,
ಸನ್ನಿಹಿತದಲ್ಲಿ ಪೂರ್ವಾಚಾರಿಯ ಕಂಡೆ,
ಗುಹೇಶ್ವರ ಲಿಂಗದಲ್ಲಿ ಪೂರ್ವಾಚಾರಿಯ ಸಂಗನಬಸವಣ್ಣನ
ಶ್ರೀ ಪಾದಕ್ಕೆ ನಮೋ ನಮೋ ಎಂಬೆನು.

ಅಲ್ಲಮ ಪ್ರಭುದೇವರು.

ಅನಾದಿ ಶರಣ ಆದಿ ಲಿಂಗವೆಂಬೆ
ಬಸವಣ್ಣನಿಂದ ಲಿಂಗವಾದ ಕಾರಣ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ.

ತೋಂಟದ ಸಿದ್ಧಲಿಂಗೇಶ್ವರರು.

# ವೈರಾಗ್ಯ ಶಿಖಾಮಣಿ ಮಹಾದೇವಿಯಕ್ಕ-4.

ಶ್ರೀ ಪೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿ ಕಾಳಿದಾಸ" ಅಥಣಿ. (ಬೆಳಗಾವಿ ಜಿಲ್ಲೆ)

## ಶ್ರೀ ಶೈಲದ ಕಡೆಗೆ ಹೋದುದು.

ಇಂತು ಮಹಾದೇವಿಯಕ್ಕ ತನಗೆ ತಾನೆ ಸಂತೈಸಿಕೊಳ್ಳುತ್ತ, ಚೆನ್ನಮಲ್ಲಿಕಾರ್ಜುನನ ಕೂಟದಾಕಾಂಕ್ಷೆಯ ನಲುಮೆ ಒಲುಮೆಯ ಭಾವಾಪೇಕ್ಷೆಯಲ್ಲಿ, ತನ್ನೆಲ್ಲ ಶರಣ ಬಳಗದಗಲಿಕೆಯ ಅನುತಾಪವನ್ನು ಮರೆಯುತ್ತ ಶ್ರೀ ಶೈಲದ ಮಹಾರಣ್ಯಕ್ಕೆ ಬರುವಳು. ಭವಾರಣ್ಯವನ್ನು ದಾಂಟಲು ಬಂದು, ಇಂತಹದುರ್ಗಮವಾದ ಘೋರಾರಣ್ಯದಲ್ಲಿ ಸಿಕ್ಕಿದೆ-ಎಂದು ಮನದಲ್ಲಿ ಮರುಗುವಳು. ದೇವಾ ಈ ಕಾಯದ ಕೊನೆಯೆಂದಿಗೆ? ಇಂತೆಂಬುದಾಗಿ ಕೇಳುತಿಹ ಅಕ್ಕಗಳ ಕನಲಿಕೆಯ ಹೃದಯವಾಣಿ :

---

ಟೀ:- ಕಲ್ಯಾಣದ ಶಿವಶರಣ ಶರಣೆಯರ ಬಳಗದಲ್ಲಿಯೇ ಅದ್ವಿತೀಯ ಮಹಿಮಾಶಾಲಿನಿಯಾದ ಮಹಾದೇವಿಯಕ್ಕಗಳ. ಸಾಹಿತ್ಯವೂ ಬಹುಬೆಲೆಯುಳ್ಳದಾಗಿ ಆಕೆಯ ವಚನಗಳ ಕೃತಿರತ್ನಗಳನ್ನೊಳಗೊಂಡ ಶಿವು ಶರಧಿಯೇತಿದೆ. (1) 'ಮಹಾದೇವಿಯಕ್ಕನ ವಚನಗಳು(340)ವಚನಗಳ ಕೃತಿರತ್ನ (ಹೆಚ್ಚಿನ ವಚನಗಳನ್ನುಳಿದು) 2) ಅಕ್ಕಗಳ ಸೃಷ್ಟಿಯ ವಚನ 3) ಅಕ್ಕಗಳ ಯೋಗಾಂಗ ತ್ರಿವಿಧಿ, 4) ಮಹಾದೇವಿಯಕ್ಕನ ಪದಗಳು. ಇತ್ಯಾದಿ ಕೃತಿಗಳನ್ನು ರಚಿಸಿದ್ದಾಳೆ ಮಹಾದೇವಿಯಕ್ಕ. ಆಕೆಯ ಈ ಕೃತಿರತ್ನಗಳೆಲ್ಲ ವಚನ ವಾಙ್ಮಯದಲ್ಲಿ ಎಂದಿಗೂ ಥಳಥಳಿಸುತ್ತಿವೆ.

---

"ಒಡಲ ಕಳವಳಕ್ಕಾಗಿ ಅಡವಿಯಹೊಕ್ಕೆನು. ಗಿಡು ಗಿಡುದಪ್ಪದೆ ಬೇಡಿದೆ ನೆನ್ನಂಗಕ್ಕೆಂದು.
ಅವು ನೀಡಿದವು ತಮ್ಮ ಲಿಂಗಕ್ಕೆಂದು. ಆನು ಬೇಡಿ ಭವಿಯಾದೆನು, ಅವು ನೀಡಿ ಭಕ್ತರಾದವು.
ಇನ್ನು ಬೇಡಿದೆನಾದಡೆ ಚೆನ್ನಮಲ್ಲಿಕಾರ್ಜುನಯ್ಯಾ ನಿಮ್ಮಾಣೆ."

ಶಿವ ಶಿವಾ ! ಬಿಸಿಲು ಬಿರುಗಾಳಿಯೆನ್ನದೆ ಉರಿವ ಕಾಳ್ಗಿಚ್ಚಿನಲ್ಲಿ ನಡೆದು ಬಂದೆ. ಈಗ ಹಸಿವು, ನೀರಡಿಕೆ, ಕೊನೆಗೇನಾಯಿತು. ಎಂದು ಸಂತಾಪದಿಂದ ಮುಂದೆ ಮುಂದೆ ಸಾಗುತ್ತ ಮಹಾದೇವಿಯಕ್ಕ ಶ್ರೀ ಪರ್ವತಾ ರೋಹಿಯಾಗಿ ಬರುತ್ತ ಕೋಗಿಲೆಯೆ ಮೊದಲಾದ ಖಗಮೃಗ ಸಂಕುಳವ ಕಂಡು-ಚೆನ್ನ ಮಲ್ಲಿಕಾರ್ಜುನಾ! ನೀನಿರುವುದೆಲ್ಲಿ ? ಯುಗ ಯುಗಾಂತರಗಳಿಂದಲೂ ಆದರಲ್ಲೂ ಈ ಕಲಿಯುಗದಲ್ಲಿ ಹೆಚ್ಚಾಗಿ ಈ ಶ್ರೀ ಗಿರಿಯಲ್ಲಿಯೇ ನೀನಿರುವೆ ಎಂದು ಕೇಳಿ ತಿಳಿದು ಬಂದೆ ಎನ್ನೊಡೆಯಾ ಇದು ನಿನ್ನ ವಿಹಾರ ಭೂಮಿ. ಇಲ್ಲಿಯ ಖಗಮೃಗಂಗಳು ಆ ನಿನ್ನ ದಿವ್ಯ ದರ್ಶನದಿಂದ ಪುನೀತವಾಗಿವೆ ' ಎಂದೊರೆಯುವ ಹಾಗೆಯೆ ಚೆನ್ನಮಲ್ಲಿಕಾರ್ಜುನ-ನಿಗಾಗಿ ಹಾತೊರೆಯುವ ಅಕ್ಕಗಳ ಅಮರವಾಣಿ :

" ಅಳಿಸಂಕುಳವೆ, ಮಾಮರವೆ, ಬೆಳದಿಗಂಳೆ, ಕೋಗಿಲೆಯೆ, ನಿಮ್ಮನೆಲ್ಲರನೂ
-ಒಂದು ಬೇಡುವೆನು,
ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ. "

" ಚಿಲಿ ಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ ? ನೀವು ಕಾಣಿರೆ.
ಸರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೆ ? ನೀವು ಕಾಣಿರೆ.
ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೆ ? ನೀವುಕಾಣಿರೆ,
ಕೊಳನ ತಡಿಯೊಳಾಡುವ ಹಂಸಗಳಿರಾ, ನೀವು ಕಾಣಿರೆ ? ನೀವು ಕಾಣಿರೆ.
ಗಿರಿಗಹ್ವರದೊಳಗಾಡುವ ನವಿಲುಗಳಿರಾ, ನೀವು ಕಾಣಿರೆ ? ನೀವು ಕಾಣಿರೆ.
ಚನ್ನ ಮಲ್ಲಿಕಾರ್ಜುನನೆಲ್ಲಿಹ ನೆಂದು ನೀವು ಹೇಳಿರೆ ? ನೀವು ಹೇಳಿರೆ. "

ಶರಣ ಸತಿ-ಲಿಂಗಪತಿ ಯೆಂಬ ಭಾವದಿಂದೊಡಗೂಡಿ ಸದಾ ಭಸ್ಮ ತ್ರಿಪುಂಡ್ರ-ರುದ್ರಾಕ್ಷಾಭರಣಲಂಕೃತಳಾಗಿ ಶಿವಾನುಭವ ಸಂಪನ್ನೆಯಾಗಿಕಂಗೊಳಿಸುವ ಮಹಾ-ದೇವಿಯಕ್ಕ ಮೊದಲೇ ಈಕೆ ರುದ್ರಕನ್ಯೆಅಂತೆಯೇ ಈಕೆ ಮಹಾ ತೇಜಸ್ವಿನಿ-'ನಾಮದಲ್ಲಿ ಹೆಂಗೂಸಾದರೂ ಭಾವಿಸಲು ಗಂಡುರೂಪು," ಅಂತೆಯೇ ಆಕೆ-ಪರಶಿವರೂಪಿ ಚನ್ನಮಲ್ಲಿಕಾರ್ಜುನನನ್ನೇ ಬಯಸಿ ಪತಿಯನ್ನಾಗಿ ಮಾಡಿಕೊಂಡು ವಳು. ಈ ಚನ್ನಮಲ್ಲಿಕಾರ್ಜನ ನಿರಾಕಾರ ನಿರಂಜನ ಜಂಗಮರೂಪಿ ಚನ್ನ-ಮಲ್ಲಿಕಾರ್ಜುನ. ಆದರೆ ಕೈಲಾಸದ ತ್ರಿಮೂರ್ತಿಗಳಲ್ಲೊಬ್ಬನಾದ ಆ ಶಿವನಲ್ಲ. ಆಕೆಯ ಪತಿ ಚನ್ನಮಲ್ಲಿಕಾರ್ಜುನ ಎಲ್ಲದೇವರಿಗೂದೇವನಾದ ಆ ಪರವಸ್ತುವಿನ ಪ್ರತೀಕ.

ಟೀ:-ಅಲ್ಲಮ ಪ್ರಭುವಿನ ಅಪ್ಪಣೆ ಆಶೀರ್ವಾದಗಳನ್ನು ಅಕ್ಕ ತಲೆಯ ಮೇಲಿರಿಸಿ ಕೊಂಡು ಶ್ರೀ ಶೈಲ ಚನ್ನಮಲ್ಲಿಕಾರ್ಜುನ ನೆಡೆಗೆ ಬರುತ್ತಾಳಷ್ಟೇ. ಪ್ರಭುವು ಮಹಾ ದೇವಿಯಕ್ಕನನ್ನು ಶ್ರೀ ಶೈಲಕ್ಕೆ ಕಳುಹಿಸಿ ಕೊಡುವುದರಲ್ಲಿ ಒಂದು ಔಚಿತ್ಯವಿದೆ-ಅದನ್ನು ಈ ಕೆಳಗಣ ಚನ್ನಬಸವಣ್ಣನವರ ಅನುಭವಾತ್ಮಕ ವಚನವಾಣಿಯಿಂದ ತಿಳಿದು ಕೊಳ್ಳಬಹುದು:

### ಜಂಗಮ ಲಿಂಗ ಸ್ಥಲ

"ಕೃತಯುಗದ ಹದಿನೇಳು ಲಕ್ಷದ ಮೇಲೆ ಇಪ್ಪತ್ತೆಂಟು ಸಾವಿರ ವರುಷದಲ್ಲಿ
ಕೇತಾರ ದೇವರು ಮೂಲಸ್ಥಾನ;
ತ್ರೇತಾಯುಗದ ಹನ್ನೆರಡು ಲಕ್ಷದ ಮೇಲೆ ತೊಂಬತ್ತಾರು ಸಾವಿರ ವರುಷದಲ್ಲಿ
ಸೇತುಬಂಧ ರಾಮೇಶ್ವರ ದೇವರು ಮೂಲಸ್ಥಾನ;
ದ್ವಾಪರಯುಗದ ಎಂಟು ಲಕ್ಷದ ಮೇಲೆ ಆರವತ್ತನಾಲ್ಕು ಸಾವಿರ ವರ್ಷದಲ್ಲಿ ಸೌರಾಷ್ಟ್ರ
ಸೋಮೇಶ್ವರ ದೇವರು ಮೂಲ ಸ್ಥಾನ.
ಕಲಿಯುಗದ ನಾಲ್ಕು ಲಕ್ಷದ ಮೇಲೆ ಮೂವತ್ತೆರಡುಸಾವಿರ ವರುಷದಲ್ಲಿ ಶ್ರೀ ಶೈಲ
ಚನ್ನ ಮಲ್ಲಿಕಾರ್ಜುನದೇವರು ಮೂಲಸ್ಥಾನ.
ಇದು ಕಾರಣ, ಕೂಡಲ ಸಂಗಯ್ಯಾ, ನೀಸಾಕ್ಷಿಯಾಗಿ ಭಕ್ತರಿಗೆ ಜಂಗಮವೆಮೂಲಸ್ಥಾನ

"ಎಂಟು ಲಕ್ಷದ ಮೇಲೆ ಐನೂರು ದೇವರಿಗೆ ಮಾಡಿದ ಬೋನವ ಒಬ್ಬ-ಜಂಗಮ ಆರೋಹಣೆಯ ಮಾಡುವನಲ್ಲದೆ, ಹದಿನಾರು ಲಕ್ಷದ ಮೇಲೆ ಐನೂರು ದೇವರು ಕೂಡಿಕೊಂಡು ಒಬ್ಬ ಜಂಗಮಕ್ಕೆ ಮಾಡಿದ ಬೋನವ ಆರೋಹಣೆಯ ಮಾಡ-ಲರಿಯರು. ಇಂತಪ್ಪ ದೇವರಿಂದ ಜಂಗಮವೆ ಘನ. ಕೃತಯುಗದಲ್ಲಿ ಸುವರ್ಣದ ಲಿಂಗವಾದಲ್ಲಿ ನಿನ್ನ ಹೆಸರೇನು ? ತ್ರೇತಾಯುಗದಲ್ಲಿ ಬೆಳ್ಳಿಯ ಲಿಂಗವಾದಲ್ಲಿ ನಿನ್ನ ತಾಯಿ ತಂದೆಯಾರು ? ದ್ವಾಪರ ಯುಗದಲ್ಲಿ ತಾಮ್ರದ ಲಿಂಗವಾದಲ್ಲಿ ಹದಿನೆಂಟು ಜಾತಿಯ ಕೈಯಲ್ಲಿ ಕಿಲುಬು ಹೋಯಿತ್ತು. ಕಲಿಯುಗದಲ್ಲಿ ಕಲ್ಲದೇವರಾದಡೆ, ಇಕ್ಕಿದ ಓಗರವನುಣ್ಣದೇಕೋ ? ಹಿಂದೊಮ್ಮೆ ನಾಲ್ಕು ಯುಗದಲ್ಲಿ ಅಳಿದು ಹೋದುದನರಿಯಾ ? ಇನ್ನೇಕೆ ದೇವತನಕ್ಕೆ ಜಿರತೆಹೆ? ಸ್ಥಾವರಂ ಜಂಗಮ ಪ್ರಸಾದ ದ್ವಿವಿಧಂ ಲಿಂಗ ಮುಚ್ಯತೇ ! ಜಂಗಮಸ್ಯಾವಮಾನೇನ ಸ್ಥಾವರಂ ನಿಷ್ಫಲಂ ಭವೇತ್ ॥ ಇದು ಕಾರಣ, ಕೂಡಲ ಚನ್ನ ಸಂಗಯ್ಯಾ ತಪ್ಪದೆ ನಾಲ್ಕು ಯುಗದಲ್ಲಿ ಜಂಗಮವೆ ಲಿಂಗವಾದ ಕಾರಣ. ಸ್ಥಾವರವೆ ಜಂಗಮ ಪ್ರಸಾದಕ್ಕೆ ಯೋಗ್ಯವಾಯಿತ್ತು"

ಮೊದಲೇ ಚೆನ್ನಾಗಿ ಸಂಸ್ಕೃತವನ್ನು ಕಲಿತಿದ್ದ ಅಕ್ಕನ ವಚನ-ಕಾವ್ಯ-ಗೀತಗಳೇ ಇತ್ಯಾದಿ ಆಕೆಯ ಕನ್ನಡ ಸಾಹಿತ್ಯ ಸಂಪತ್ತೆಲ್ಲ ಆ ಪ್ರಾಸಾದಿಕವಾಣಿಗಳಿಂದ ತುಂಬಿ ನಿಂತಿದೆ. ಅಂತೆಯೇ ಆಕೆಯ ಮಾತುಗಳೆಲ್ಲ ಜ್ಯೋತಿರ್ಲಿಂಗಗಳಾಗಿ ಅವಳ ವಚನ ಸಾಹಿತ್ಯ-ಸಮಗ್ರ ವಚನ ವಾಙ್ಮಯ ದಲ್ಲಿಯೇ ಒಂದು ವಿಶಿಷ್ಟ ಶಕ್ತಿಯನ್ನು ತಳೆದು ನಿಂತಿದೆ. ಕಾಲ ಕರ್ಮ ಮಾಯೆಗಳೆಲ್ಲವನ್ನು ಜಯಿಸಿನಿಂದ ಮತ್ತು ಆ ಪರಶಿವ ಜಂಗಮ ಪ್ರಾಣಲಿಂಗಮಯ ಚೆನ್ನ ಮಲ್ಲಿಕಾರ್ಜುನನೇ ತನ್ನ ಗಂಡನೆಂಬ ಭಾವನೆಯ ಮಹಾಧ್ವನಿ-ಪ್ರತಿಧ್ವನಿಯಾಗಿ, ಆ ಧ್ವನಿ ರಸಪಾಕವಾಗಿ, ಸಾಹಿತ್ಯ ಸುಧಾಗಂಗೆಯಾಗಿ ತುಂಬ ಪ್ರವಹಿಸಿಸುತ್ತಲಿದೆ–ಮಹಾದೇವಿಯಕ್ಕನ ವಚನ ವಾಣಿಗಳಲ್ಲಿ ಈಗ ಅಕ್ಕ ಶ್ರೀಪರ್ವತಾರೋಹಿಯಾಗಿ ಬಂದಿದ್ದಾಳೆ. ದೇವನ ಕುರಿತು ಗಿಳಿ ಕೋಗಿಲೆಗಳನ್ನು ಕೇಳುತ್ತಾಳೆ. ಅಕ್ಕಗಳ ಪ್ರಾಸಾದಿಕವಾಣಿಯಾದ ಈ ಮೇಲಣ ವಚನ ರತ್ನದ ತಾತ್ಪರ್ಯ:–

'ಚಿಲಿ ಮಿಲಿ' ಕೂಗುವ ಗಿಳಿಗಳೇ ನೀವು ಕಾಣಿರೆ ? (ನೀವು ಮಹಾದೇವನನ್ನು ನೋಡಲಿಲ್ಲವೆ? ) ಎಂಬ ಒಂದನೆಯ (೧) ಪದವು ಪ್ರಶ್ನೆ, ನೀವು ಕಾಣಿರೆ. (ನೀವು ಮಹಾ ದೇವನ ಕಾಣಿರೆ.) ಎಂಬ ಎರಡನೆಯ ಪದ ಅದಕ್ಕೆ ಉತ್ತರ. ಇದರಂತೆ ಕೋಗಿಲೆ, ತುಂಬಿ, ( ಗುಂಗೆ ಹುಳ ), ಹಂಸ, ನವಿಲು, ಇವುಗಳೊಡನೆ ಸಂಭಾಷಣೆ, ಕಡೆಯಲ್ಲಿ ಮಹಾದೇವನು ಎಲ್ಲಿ ಇದ್ದಿರುತ್ತಾನೆ-ಎಂಬುದನ್ನು ನೀವು ಹೇಳಬಲ್ಲಿರಾ ? ಎಂಬ ಪ್ರಶ್ನೆ ನೀವು "ಮಹಾದೇವ" ಎಂದು ಹೇಳಿರೆ ಎಂಬ ಉತ್ತರ. ಟಿಪ್ಪಣಿ:- ಅಕ್ಕನ ಹಿಂದಿನ ವಚನಗಳಲ್ಲಿ ಸರ್ವವೂ ಬ್ರಹ್ಮ ಎಂಬ ಶಿವತತ್ವವನ್ನು ಆಕೆಯು ತಿಳಿದು ಕೊಂಡುದು ವ್ಯಕ್ತ ಪಟ್ಟಿದೆ. ಇಲ್ಲಿ ಅರಿಯದಂತೆ ಕೇಳಿದ ವಚನವಿದಲ್ಲ.

ಸಂಸ್ಕೃತದಲ್ಲಿ ಪ್ರಶ್ನೆ ಉತ್ತರ ಎರಡೂ ಒಂದರಲ್ಲಿಯೇ ಇರುವ 'ಅಂತರ್ಲಾಪಿ, ಎಂಬ ಹೆಸರಿನ ಶ್ಲೋಕಗಳಿವೆ. "ಕಾ ಶೀತಲ ವಾಹಿನೀ ಗಂಗಾ" ತಣ್ಣಗೆ ಹರಿಯುವ ಗಂಗೆ ಯಾವುದು ? " ಕಾಶಿತಲವಾಹಿನೀಗಂಗಾ " ಕಾಶೀ ಸ್ಥಳದಲ್ಲಿ ಹರಿಯುವ ಗಂಗೆ ಎಂಬುದು ಅದಕ್ಕೆ ಉತ್ತರ.

ಇದರಂತೆ " ಕಂ ಬಲವಂತಂನ ಬಾಧತೇ ಶೀತಂ " ಎಂಬುದು. ಇಂತಹ ಅಂತರ್ಲಾಪಿಶ್ಲೋಕಗಳಂತೆ ಈ ವಚನವಿದೆ. ಅಕ್ಕನು ಸಂಸ್ಕೃತ ಭಾಷಾ ಜ್ಞಾನವನ್ನು ಚೆನ್ನಾಗಿ ಹೊಂದಿದ್ದಳೆಂಬುದು. ಈ ಹಿಂದಿನ ವಚನಗಳಿಂದಲೇ ಗೊತ್ತಾಗಿದೆ.

ಇಲ್ಲಿ ಅಕ್ಕ-ವನದಲ್ಲಿಯ ಗಿಳಿ, ಕೋಗಿಲೆ, ಹಂಸ, ತುಂಬಿ ಮೊದಲಾದುವುಗಳಿಗೆ ನೀವು ಮಹಾದೇವನನ್ನು ನೋಡಲಿಲ್ಲವೇ ? ನೀವು ಮಹಾದೇವನನ್ನು ಕಾಣಿರೆ. 'ಸರ್ವವೂ ಬ್ರಹ್ಮ' ಎಂಬ ಭಾವನೆಯಿಂದ ತುಂಬಿದ ಈ ಅಂತರ್ಲಾಪಿ ವಚನಗಳಲ್ಲಿ ಆ ಶಿವತತ್ವ ತುಂಬಿ ತುಳುಕಿ, ಅದೇಧ್ವನಿ ರಸವಾಹಿನಿಯಾಗಿ ಹರಿಯುತ್ತಿರುವುದ ನ್ನು ನಾವು ಚೆನ್ನಾಗಿ ನೋಡಬಹುದಾಗಿದೆ-ಆಕೆಯ ಗೀತವಾಣಿಗಳಲ್ಲಿ.

ಹೀಗೆ ಇಂಚರ ಸ್ವರಗೆಯ್ದು ಹಾಡಿನಲಿಯುತ್ತಿರುವ ಕೋಗಿಲೆ, ಗಿಳಿ, ಹಂಸೆ ಮೊದಲಾದುವುಗಳನ್ನು ಅಕ್ಕರೆಯಿಂದ ಆ ಮಹಾದೇವನ ಬಗೆಗೆ ಕೇಳಿ-ಹೇಳುತ್ತಲಿದ್ದ ಮಹಾದೇವಿಯಕ್ಕಗೆ ತನ್ನದನಿಯೇ ಮರುದನಿಯಾಯಿತು.

ಸೂಚನೆ:– 'ಅಕ್ಕಮಹಾದೇವಿ ವಚನಾರ್ಥ' ಎಂಬ (ಅಕ್ಕಗಳ ಅರ್ಥತಾತ್ಪರ್ಯ–ಟಿಪ್ಪಣಿಯುಕ್ತ ವಾದ) ಗ್ರಂಥವನ್ನು ರಚಿಸಿ–ಪ್ರಕಟಿಸಿದವರು-ಶಿರಾಳಕೊಪ್ಪದ ಶ್ರೀ ಚೆನ್ನಮಲ್ಲಿಕಾರ್ಜುನರು-ಗ್ರಂಥ ಪ್ರಕಟವಾದುದ್ದು–ಸುಮಾರು ಕ್ರಿ ಶ' 1955 ರ ಪೂರ್ವದಲ್ಲಿ. (ಈ ಕೃತಿ, ಮೊದಲನೆಯ ಭಾಗ ಎರಡನೆಯ ಭಾಗ ಮುದ್ರಣವಾಗುತ್ತಿದೆ. ಎಂದಿರುವರು) 'ಅಕ್ಕ ಮಹಾದೇವಿ ವಚನಾರ್ಥ' ಗ್ರಂಥದಲ್ಲಿನ 129 ನೆಯ ವಚನವೇ " ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ. ? ನೀವುಕಾಣಿರೆ, " ಈ ಅಂತರ್ಲಾಪಿ ' ವಚನಕ್ಕೆ ಅವರೇ ಬರೆಯಲಾದ ತಾತ್ಪರ್ಯ–ಟಿಪ್ಪಣಿಯನ್ನು ಈ ಸಂದರ್ಭದಲ್ಲಿ ಉದ್ಧರಿಸಿ ಕೊಡುವದಕ್ಕಾಗಿ ಲಿಂ ॥ ಚೆನ್ನಮಲ್ಲಿಕಾರ್ಜುನ ಅವರ ಮಹದುಪಕಾರ ವನ್ನಿಲ್ಲಿ ನಾವು ಬಹಳವಾಗಿ ಸ್ಮರಿಸದಿರಲಾರೆವು–ಇಂತಹ ಮಹಾನುಭಾವಿಗಳ ಚರಣ ಕಮಲಗಳಿಗೆ ನಮ್ಮಯ ಅನಂತ ಭಕ್ತ ಪ್ರಣಾಮಗಳು.

ಎಂಟುನೂರು ವರ್ಷಗಳಿಂದಲೂ ಅರ್ಥಸಹಿತವಾಗಿ ಪ್ರಕಟಿತವಾಗದಿದ್ದ ಅಕ್ಕನ ವಚನ– (150, ವಚನಗಳು, ) ಕೃತಿರತ್ನ ಪ್ರಥಮ ಭಾಗವಾಗಿ ' ಅಕ್ಕಮಹಾದೇವಿ ವಚನಾರ್ಥ ' ಎಂಬ ನಾಮದಿಂದ ಗ್ರಂಥ ಹೊರಬಂದುದು ಅತ್ಯಂತ ಸಂತೋಷಕರ ಸಂಗತಿ.

ನಮ್ಮ ಸಮಕಾಲದ ಹಿರಿಯ ಮಹಾನುಭಾವಿಗಳಾದ ಶಿರಾಳ ಕೊಪ್ಪದ ಓರಿ ಶ್ರೀ ಚನ್ನಮಲ್ಲಿ- ಕಾರ್ಜುನಪ್ಪನವರು 80 ವರ್ಷಕ್ಕೂ ಮೀಕ್ಕಿದ ವಯೋವೃದ್ಧರೂ, ಜ್ಞಾನವೃದ್ಧರೂ, ಶಿವಾನುಭಾವಿ- ಗಳೂ ಸತ್ಯಾನ್ವೇಷಿಗಳೂ. ಕೂಲಂಕಷವಾದ ಒಳ್ಳೇ ವಿಮರ್ಶಾ ಶಕ್ತಿಯುಳ್ಳವರೂ, ಪ್ರಾಚೀನ ಶಿವಶರಣ ಹೃದಯಿಗಳೂ. "ಸದ್ಧರ್ಮದೀಪಿಕೆ" ಮಾಸಪತ್ರಿಕೆಯ ಸಂಪಾದಕರೂ, ಹಲವಾರು ಧರ್ಮಗ್ರಂಥಗಳ

ಲೇಖಕರೂ. ಮತ್ತು ಪ್ರಕಾಶಕರೂ, ಆಗಿದ್ದರು. ಇವರು ಈ ಮೊದಲೇ 'ಬಸವೇಶ್ವರನ ಕಾಲ 'ಸಿದ್ದೇಶ್ವರ ವಚನ' 'ಮಹಾದೇವಿಯಕ್ಕನ ರಗಳೆ' ಮತ್ತು 'ಯೋಗಾಂಗ ತ್ರಿವಿಧಿ' 'ಮುಕ್ತ್ಯಂ ನಾಕಂಠಮಾಲೆ' 'ವಾಗದ್ವೈತ ನಿರಶನ' 'ಪಂಚಾಚಾರ್ಯರ ಚರಿತ್ರೆ-ಮುಖ್ಯ ವಿಷಯ-ರೇವಣ್ಣ ಸಿದ್ಧರು (ಮಹಾ ಸಂಶೋಧನಾತ್ಮಕ ಉದ್ಗ್ರಂಥ) ಮಹಾಕೃತಿಗಳನ್ನು ರಚಿಸಿ ಪ್ರಕಟಿಸಿದ್ದಾರೆ ಮತ್ತು ನನ್ನೆರಡು ಕಾವ್ಯಗಳನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿರುವರು.

"ಕನ್ನಡಕವಿ ಕಾಳಿದಾಸ" ನು ಶ್ರೀ ಚನ್ನಮಲ್ಲಿಕಾರ್ಜುನರ 'ಅಕ್ಕಮಹಾದೇವಿ ವಚನಾರ್ಥ ಗ್ರಂಥ ವಿಮರ್ಶೆಯನ್ನು-ಗದುಗಿನ ಪಾಕ್ಷಿಕ-ಪತ್ರಿಕೆ. ದಿ 3-8-1955 ರ 'ಸಾವಧಾನ' ದಲ್ಲಿಯು ಮತ್ತು ಅವರ ಜೀವನಚರಿತ್ರೆ (ವೀರಶೈವ ವಿಭೂತಿಗಳು ಕೂಡಿಸಮಾವೇಶವಾದ) ಯನ್ನು ಬರೆದ ಪ್ರಕಟಿಸಿದ್ದಾಗಿದೆ.

ಮೂಕ ಜೀವಿಗಳಿಂದ ಮರಳಿ ಉತ್ತರ ಬರುವುದೆಂತು ? ನಾನೆಂತಹ ಮರುಳು ಖಗಮೃಗಂಗಳು ಕೇಳಬಲ್ಲುವಲ್ಲದೆ ನುಡಿಯ ಬಲ್ಲವೆ ? ಎನ್ನರಸ ಚನ್ನಮಲ್ಲೇಶ ! ನಿನ್ನರಸಿ ಬಂದೆ. ಕಂಡು ನುಡಿಸಲಾರೆಯಾ ? ಎಂದು ತನ್ನೊಡೆಯನಿಗೆ ಅಂಗಲಾಚ ಕೇಳಿಕೊಳ್ಳುವ ಆರ್ತ ಹೃದಯದ ಅಕ್ಕನ ವಚನವಾಣಿ :

"ವನವೆಲ್ಲಾ ನೀವೆ. ವನದೊಳಗಣ ದೇವ ತರುವೆಲ್ಲಾ ನೀವೆ.
ತರುವಿನೊಳಗಾಡುವ ಖಗಮೃಗವೆಲ್ಲಾ ನೀವೆ. ಚನ್ನಮಲ್ಲಿಕಾರ್ಜುನ
ಸರ್ವಭರಿತನಾಗಿ ಎನಗೇಕೆ ಮುಖದೋರೆ ?"

ದೇವಾ ! ಮುಂದೆ ಮುಂದೆ ಸಾಗಿ ಬಂದಂತೆ ನನ್ನ ಭ್ರಾಂತಿಯು ಬೆಳೆಯುತ್ತಿದೆ ಎನ್ನನಲ್ಲ ಚನ್ನಮಲ್ಲೇಶ ! ಮಹಾರಣ್ಯದ ದಟ್ಟಡವಿಯಲ್ಲಿ, ತರುಲತಾದಿ ಮರಂಗಳಲ್ಲಿ ಖಗ ಮೃಗಂಗಳಲ್ಲಿ ನಿನ್ನರಸುವ ಎನ್ನಮನದಳಲಿಂಗೆ ಕೊನೆಯೆಂದು ? ಈ ನನ ವಿಚಾರ ವಿವೇಕಕ್ಕೆ ನೆಲೆಗಾಣಿಸುವ ದಿನವೆಂದು ? ಎಂದು ಅನುತಾಪವನ್ನರುಹುವ ಅಕ್ಕನ ವಚನವಾಣಿ :

"ಬಯಲು ಲಿಂಗವೆಂಬೆನೆ ? ಬಗಿಮು ನಡೆದಲ್ಲಿ ಹೋಯಿತ್ತು.
ಬೆಟ್ಟ ಲಿಂಗವೆಂಬೆನೆ ? ಮೆಟ್ಟ ಸಿಂದಲ್ಲಿ ಹೋಯಿತ್ತು,
ತರುಮರಾದಿಗಳು ಲಿಂಗವೆಂಬೆನೆ ತರಿದಲ್ಲಿ ಹೋಯಿತ್ತು.
ಲಿಂಗ ಜಂಗಮದ ಪಾದವೇ ಗತಿ ಎಂದು ನಂಬಿದ ಸಂಗನ ಬಸವಣ್ಣನ
ಮಾತು ಕೇಳದೆ ಕೆಟ್ಟೆನಯ್ಯಾ ಚನ್ನಮಲ್ಲಿಕಾರ್ಜುನಾ."

# ಸೂಜಿ ಕಾಯಕದ ರಾಮಿತಂದೆ

ಲೇಖಕರು : ಪ್ರೊ. ಎಸ್. ಎಸ್. ಭೂಸರೆಡ್ಡಿ, ಕ. ವಿ. ವಿ. ಧಾರವಾಡ - 3.

ಬಸವಾದಿ ಪ್ರಮಥ ಪುಂಗವರ ಸಮಕಾಲೀನರಾಗಿ ಬೆಳಗಿದ ಅನಂತ ವಚನಕಾರರು ಇನ್ನೂ ಅಜ್ಞಾತ ಸ್ಥಿತಿಯಲ್ಲಿಯೇ ಉಳಿದಿದ್ದಾರೆ; ಕಾಲಗರ್ಭದಲ್ಲಿ ಅಡಗಿ ಹೋಗಿದ್ದಾರೆ. ಸುಮಾರು 365 ವಚನಕಾರರು ವಚನರಚನೆಯನ್ನು ಮಾಡಿದ್ದಾರೆಂದು ಸಂಶೋಧನೆಯಿಂದ ತಿಳಿದು ಬಂದಿದೆ. ಅವರ ಶ್ರೇಣಿಯಲ್ಲಿ ಈಗಾಗಲೇ ಬಸವಣ್ಣ ಚನ್ನಬಸವಣ್ಣ ಅಲ್ಲಮಪ್ರಭು, ಸಿದ್ಧರಾಮ, ಅಕ್ಕಮಹಾದೇವಿ ಮೊದಲಾದವರ ಹೆಸರುಗಳು ಜನತೆಯ ಹೃದಯಮಂದಿರದಲ್ಲಿ ಅಚ್ಚಹಸಿರಾಗಿ ನಳನಳಿಸುತ್ತಿರುವುದು ಸಂತೋಷದ ಸಂಗತಿಯೇಸರಿ. ಅವರ ವಚನ ಪ್ರಚಾರ ನಡೆದಿರುವುದು ಅಭಿಮಾನ ಹೆಮ್ಮೆಯ ವಿಷಯ ಕಲ್ಯಾಣದ ಅನುಭವ ಮಂಟಪದಲ್ಲಿ ದೇಶದ ನಾನಾ ಭಾಗಗಳಿಂದ ಮಹಾನುಭಾವರು ಬಂದಿರುವುದು ಐತಿಹಾಸಿಕ ಸತ್ಯ. ಕಾಶ್ಮೀರ, ಒಡಿಸ್ಸಾ ಗುಜರಾತ್, ಮಧ್ಯಪ್ರದೇಶ, ಕೇರಳ, ಆಂಧ್ರ, ಅಫಘಾನಿಸ್ತಾನ ಮೊದಲಾದ ಪ್ರದೇಶದಿಂದ ಕನ್ನಡ ನಾಡಿನ ಕಲ್ಯಾಣ ಮಹಾನಗರದಲ್ಲಿ ಸೇರಿ ವಿನೂತನ ವಿಶ್ವಧರ್ಮವನ್ನು ಸ್ಥಾಪಿಸಿರುವುದು ವಿಶ್ವದಇತಿಹಾಸದಲ್ಲಿಯೇ ಒಂದು ಅಪೂರ್ವದಾಖಲೆ. ವೇಷ, ದೇಶ, ಜಾತಿ, ಮತ, ಪಂಥ ಭೇದ ಭಾವನೆಯನ್ನು ಮರೆತು ಜಾತೀಯ ಜಾಲವನ್ನೇ ಹರಿದು ಮಾನವ ಕುಲಕೋಟಿಯ ಉದ್ಧಾರಕ್ಕಾಗಿ ಸಕಲ ಜೀವಿಗಳಿಗೆ ಲೇಸನೇ ಬಯಸುವ ಮಾನವಧರ್ಮವನ್ನು ನೀತಿಯ ತಳಹದಿಯ ಮೇಲೆ ರೂಪಿಸಿದ ಕೀರ್ತಿ ಅವರದು. ತಮ್ಮ ಅಪಾರ ಅನುಭವದ ಅಮೃತವನ್ನು ಪರಸ್ಪರ ಚಿಂತನ ಮಂಥನ ಅಮೃತ ಫಲವಾಗಿ ಹೊರಬಂದ ವಿಚಾರ ವಾಹಿನಿಯನ್ನು ವಚನಗಳ ಮುಖಾಂತರ ಬಿತ್ತರಿಸಿದರು. ಅದೊಂದು ನೂತನ ರೂಪದ ವಿರಳ–ಪ್ರಕಾರವೆಂದು ಜಾಗತಿಕ ಸಾಹಿತ್ಯ ಪ್ರಪಂಚದಲ್ಲಿಯೇ ಮನ್ನಣೆಯ ಗಣ್ಯಸ್ಥಾನವನ್ನು ಪಡೆದಿದೆ ಕನ್ನಡಿಗರ ಕೀರ್ತಿ ಪತಾಕೆಯನ್ನು ಎತ್ತಿಹಿಡಿದಿದೆ. ಕಾಯಕ, ದಾಸೋಹ ಮಹಿಳಾವಿಮೋಚನೆ, 'ಏಕದೇವೋಪಾಸನೆ ದಲಿತೋದ್ಧಾರ, ಮೊದಲಾದ ಮಹತ್ವದ ರಾಷ್ಟ್ರೀಯ ವಿಷಯಗಳ ಮೇಲೆ ತಮ್ಮ ಅಪೂರ್ವ ಅನುಭವಗಳನ್ನು ವಚನ ಸಾಹಿತ್ಯದ ಮೂಲಕ ವಿಶ್ಲೇಷಿಸಿದ್ದಾರೆ, ಪ್ರತಿಪಾದಿಸಿದ್ದಾರೆ. ಈ ದಿಸೆಯಲ್ಲಿ ಇನ್ನುಳಿದ ವಚನಕಾರರ ಮನೋಧರ್ಮವನ್ನು ಅರಿತುಕೊಳ್ಳುವುದು ಎಂದಿಗಿಂತಲೂ ಇಂದು ಅವಶ್ಯವಾಗಿದೆಯೆಂದು ಭಾವಿಸಿದ್ದೇನೆ. ಈ ದಿಸೆಯಲ್ಲಿ ಸೂಜಿ ಕಾಯಕದ ರಾಮಿತಂದೆ ಓರ್ವ ಅಪೂರ್ವ ಅಜ್ಞಾತ ವಚನಕಾರ ಇಲ್ಲಿ ತಂದೆ ಎಂದು ಸಂಬೋಧಿಸಿರುವುದು ವಿಚಾರಣೀಯ ಸಂಗತಿ. ವಚನ ಸಾಹಿತ್ಯ ಮಹಾಸಾಗರವನ್ನು ಈಜುವ ಪ್ರಯತ್ನ ಮಾಡಿದವರಿಗೆ ಈ ವಿಷಯ ತಿಳಿದಿರಲು ಸಾಕು, ಈ ಕೆಳಗಿನ ಶರಣರ ಹೆಸರುಗಳನ್ನು ಪರಿಶೀಲಿಸಿದರೆ ಈ ಮಾತು ಇನ್ನೂ

ಸ್ಪಷ್ಟವಾಗಬಹುದಾಗಿದೆ. ಇವರು ಬಸವಾದಿ ಪ್ರಮಥರಿಗೆ ಪೂಜ್ಯರು, ಹಿರಿಯರೂ ಆಗಿರಲು ಸಾಕು. ಅಂತೆ "ತಂದೆ" ಎಂಬ ಪದ ಸೇರಿಕೊಂಡಿದೆ:

1 ಅಂಗ ಸೋಂಕಿನ ಲಿಂಗತಂದೆ
2 ಏಕಾಂತದ ರಾಮಿತಂದೆ
3 ಅರಿವಿನ ಮಾರಿತಂದೆ
4 ಕನ್ನಡ ಮಾರಿತಂದೆ
5 ನಗೆ ಮಾರಿತಂದೆ
6 ಕಂಬದ ಮಾರಿತಂದೆ
7 ಸತ್ತಿಗೆಯ ಕಾಯಕದ ಮಾರಿತಂದೆ
8 ಕೂರಿನ ಮಾರಿತಂದೆ
9 ಅಮರ ಗುಂಡದ ಮಲ್ಲಿ ಕಾರ್ಜುನ ತಂದೆ
10 ಮಾನ ಸಂದದ ಮಾರಿತಂದೆ
11 ಮೋಳಿಗೆಯ ಮಾರಿತಂದೆ
12 ಸೂಜಿಕಾಯಕದ ರಾಮಿತಂದೆ

ಹೀಗೆ ಇನ್ನೂ ಸರಿಯಾದ ಸಂಶೋಧನೆ ಮಾಡಿದರೆ ಈ ಯಾದಿ ಬೆಳೆಯ ಬಹುದಾಗಿದೆ. ಇವರೆಲ್ಲರೂ ಐತಿಹಾಸಿಕ ಪ್ರಸಿದ್ಧ ಶ್ರೇಷ್ಠ ವಚನಕಾರರು. ಸಹಸ್ರ ಗಣ ನಾಮಾವಳಿಯಲ್ಲಿ ಸುಳಿವ ಶಾಸನದಂತೆ ಸುಳಿದಿದ್ದಾರೆ ಕಾವ್ಯ ಪುರಾಣಗಳಲ್ಲಿ ಇವರ ಹೆಸರುಗಳನ್ನು ಸುವರ್ಣಾಕ್ಷರಗಳಿಂದ ಕೆತ್ತಲಾಗಿದೆ. ಅನುಭವದ ನೆಲಗಟ್ಟಿನ ಮೇಲೆ ಸ್ವತಂತ್ರವಾದ ಧೀಮಂತವಾದ ಧಾರ್ಮಿಕ ಮನೋಜ್ಞ ಮಹತ್ವದ ವಿಚಾರ-ಗಳನ್ನು ವಚನಗಳ ಮೂಲಕ ಅಭಿವ್ಯಕ್ತ ಪಡಿಸಿದ್ದಾರೆ. ನಮ್ಮ ಬಾಳಿಗೆಬೆಳಕನ್ನಿತ್ತಿ-ದ್ದಾರೆ. ಮಾರ್ಗದರ್ಶಕ ಸಫಲ ಸೂತ್ರಗಳನ್ನು ಬಿಡಿಸಿದ್ದಾರೆ.

ಇವರೆಲ್ಲರ ವಚನಗಳು ಚಲ್ಲಾ ಪಿಲ್ಲಿಯಾಗಿ ಹಲವು ಹನ್ನೊಂದು ಕಟ್ಟುಗಳಲ್ಲಿ ಹಂಚಿ ಹರಡಿ ಹೋಗಿವೆ; ಇದ್ದಷ್ಟು ವಚನಗಳನ್ನಾದರೂ ಶಾಸ್ತ್ರೀಯವಾಗಿ ಶುದ್ಧವಾಗಿ ಸಂಪಾದಿಸಿ ಪ್ರತಿಯೊಬ್ಬ ವಚನಕಾರರ ಪ್ರತ್ಯೇಕ ಕೃತಿಗಳನ್ನು ಕನ್ನಡಿಗರ ಮುಂದೆ ಬಿಚ್ಚಿಡುವ ಬೆಟ್ಟದಷ್ಟು ಕಾರ್ಯ ನಮ್ಮ ಮುಂದೆ ಒಟ್ಟನಿಂತಿದೆ. ಈ ನಿಟ್ಟಿನಿಂದ ವಿಚಾರಿಸಿದರೆ ನಮ್ಮವರ ಉದಾಶೀನತೆ, ನಿರ್ಲಕ್ಷತೆ ತಟ್ಟನೆ ಎದ್ದು ಕಾಣುತ್ತಿದೆ. ಕೇವಲ ಮಾತಿನ ಮಂಟಪ ಕಟ್ಟಿಸಿದರೆ, ಪಾಂಡಿತ್ಯ ಪ್ರದರ್ಶನ ಮಾಡಿದರೆ, ಅದೊಂದು ವ್ಯಕ್ತಿ ಪ್ರತಿಷ್ಠತೆಯ ಪ್ರದರ್ಶನವಾದೀತು. ಇದಕ್ಕಾಗಿ ನಮ್ಮ ಮಠಾಧೀಶರು ವ್ಯರ್ಥ-ವಾಗಿ ಹಣವನ್ನು ನೀರಿನಂತೆ ಬಳಸುವ ಧಾರುಣದುರಂತವನ್ನು ನೋಡುತ್ತಿದ್ದೇವೆ. ಇದನ್ನು ಬದಿಗೆ ಸರಿಸಿ ಇನ್ನೂ ಬೆಳಕಿಗೆ ಬಾರದ ಅನೇಕ ಅಜ್ಞಾತ ವಚನಕಾರರನ್ನು ಬೆಳಕಿಗೆ ತರುವ ಪರಮ ಪುಣ್ಯಕಾರ್ಯವನ್ನು ಮಾಡಿದರೆ ಅವರ ಹೆಸರು ಮುಂದಿನ ಇತಿಹಾಸದಲ್ಲಿ ದಾಖಲೆಯಾಗಿ ಉಳಿಯಬಹುದು. ಮಾಡಿ ಮಡಿದವರನ್ನು ಕೃತಜ್ಞತೆ-ಯಿಂದ ಸ್ಮರಿಸುವುದು ಜನಾಂಗದ ಜೀವಂತ ಲಕ್ಷಣವಲ್ಲವೇ ? ಆಕೆಗೆ ನಮ್ಮ ಸುಶಿಕ್ಷಿತ ಪಂಡಿತ ಮಂಡಳಿಯಲ್ಲಿಯೇ ವಚನಕಾರರ ಬಗೆಗೆ ಸರಿಯಾದ ತಿಳುವಳಿಕೆಯಿಲ್ಲವೆಂದು ಹೇಳಲು ವಿಷಾದಿಸ ಬೇಕಾಗಿದೆ. ಸೂಜಿಕಾಯಕದ ರಾಮಿತಂದೆಗಳ ವಿಷಯವಾಗಿಯೇ

ಓರ್ವ ಪ್ರಸಿದ್ಧ ಪತ್ರಕರ್ತ ಶರಣಾಭಿಮಾನಿ, ಸೂಜಿಕಾಯಕದ ರಾಮಿತಂದೆಗಳ ವಚನಗಳೇ ದೊರೆಯುವುದಿಲ್ಲ; ಇನ್ನು ಅಂಕಿತದ ಬಗೆಗೆ ತಿಳಿಯುವುದೆಂತು ? ಎಂದು. ಸಂಶಯ ವ್ಯಕ್ತ ಮಾಡಿರುವುದೇ ಮೇಲಿನ ಅಭಿಪ್ರಾಯಕ್ಕೆ ಜ್ವಲಂತ ಸಾಕ್ಷಿ ಆದುದರಿಂದ ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣ ಮಹಾನಗರದ ಅನುಭವ ಮಂಟಪದಲ್ಲಿ ಬಾಳಿ ಬೆಳಗಿದ ಸಮಗ್ರ ವಚನಗಳು ಇಂದು ಬೆಳಗಿದ ಸಮಗ್ರ ವಚನಗಳು ಇಂದು ಬೆಳಕಿಗೆ ಬರಬೇಕಾಗಿವೆ. ಕನ್ನಡಿಗರ ಮನೆ ಮನೆಯಲ್ಲಿ ಮನಮನದಲ್ಲಿ ತುಂಬಿಕೊಳ್ಳಬೇಕಾಗಿದೆ ಸಾಹಿತ್ಯ ಉಳಿದರೆ ಧರ್ಮ ಉಳಿಯುತ್ತದೆಂಬುದನ್ನು ಮರೆಯಬಾರದು

ಸೂಜಿ ಕಾಯಕದಲ್ಲಿ ನಿರತರಾದವರಲ್ಲಿ ಸೂಜಿಕಾಯಕದ ವೀರಯ್ಯ, ಸೂಜಿ-ಕಾಯಕದ ಭೈರಣಯ್ಯ, ಸೂಜಿಕಾಯಕದ ನಾಗಯ್ಯ, ಶಂಕರ ದಾಸಿಮಯ್ಯ. ಇವರ ಸಾಲಿನಲ್ಲಿ ಶೋಭಿಸುವ ಸೂಜಿಕಾಯಕದ ರಾಮಿತಂದೆ ಇನ್ನೊಬ್ಬ ಉನ್ನತನಿಲುವಿನ ವಚನಕಾರ, ಸೂಜಿಕಾಯದ ರಾಮಿತಂದೆಯ ಕಾಲವನ್ನು ಕವಿಚರಿತಕಾರರು ಸು. 1160 ಎಂದು ಉಲ್ಲೇಖಿಸಿದ್ದಾರೆ. ಈತನು ಕಾಯಕಯೋಗಿ ಎಂಬುದಕ್ಕೆ ಒಂದು ಕಥೆ ಪ್ರಚಲಿತವಿದೆ. ಈತನ ಕಾಯಕ ನಿಷ್ಠೆಯನ್ನು ಮೆಚ್ಚಿಕೊಂಡ ಶಿವನು ಪ್ರತ್ಯಕ್ಷನಾಗಿ ಬೇಕಾದವರವನ್ನು ಕೇಳೆಂದಾಗ ರಾಮಿತಂದೆ ರಾತ್ರಿಯಲ್ಲಿಯೂ ಸಹ ನನ್ನ ಕಣ್ಣು ಸರಿಯಾಗಿ ಕಾಣುವಂತೆ ಮಾಡೆಂದು ಕೇಳಿಕೊಂಡನಂತೆ; ಯಾವುದೇ ನಿಟ್ಟಿ-ನಿಂದ ನೋಡಿದರೂ ಸೂಜಿಕಾಯಕದ ರಾಮಿತಂದೆ ಕ್ರಿಯಾಶೀಲ, ನಿಷ್ಠಾವಂತ ಶ್ರೇಷ್ಠ ಶಿವಶರಣ. ಶರಣ ಸಂಸ್ಕೃತಿಯ ಸೌರಭ್ಯ ಸೂಸಿದ ಮಹಾನುಭಾವ. ಅವನ ವಚನ-ಗಳ ಅಂಕಿತ "ಪ್ರಸನ್ನ ಕಪಿಲಸಿದ್ಧ ಮಲ್ಲಿಕಾರ್ಜುನ" ಇದನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ರಾಮಿತಂದೆ, ಸಿದ್ಧರಾಮ, ಶಿವಯೋಗಿಯ ಶಿಷ್ಯಕೋಟಿಗೆ ಸೇರಿದವ-ನಾಗಿರಬೇಕು, ಸಿದ್ಧರಾಮ ಶಿವಯೋಗಿಯ ಅಂಕಿತ ಕಪಿಲಸಿದ್ಧ ಮಲ್ಲಿಕಾರ್ಜುನ. ರಾಮಿತಂದೆ ಈ ಅಂಕಿತದ ಹಿಂದೆ 'ಪ್ರಸನ್ನ, ಎಂಬ ಗೌರವ ಸೂಚಕ ಕೃತಜ್ಞತಾಪೂರ್ವಕ ಪದವನ್ನು ಸೇರಿಸಿದ್ದಾನೆ. ಈ ಬಗೆಗೆ ಹೆಚ್ಚಿನ ಸಂಶೋಧನೆ ನೆಡೆಸಬೇಕಾಗಿದೆ. ವಿಚಾರ ವಿಮರ್ಶೆ ನಡೆಯಬೇಕಾಗಿದೆ,

## ವಚನ ವಿವೇಚನೆ

ಇತ್ತೀಚಿಗಿನ ಸಂಶೋಧನೆಯ ಬೆಳಕಿನ ಹಿನ್ನೆಲೆಯಲ್ಲಿ ಪರಿಶೀಲಿಸಿದರೆ, ಇದೀಗ ಆತನ ಹನ್ನೊಂದು ವಚನಗಳು ಉಪಲಬ್ಧವಾಗಿವೆ. ಈ ವಚನದಲ್ಲಿ ತನ್ನ ಕಾಯಕದ ಪ್ರಕ್ರಿಯೆಗಳ ಮೂಲಕ ವೀರಶೈವ ಸಿದ್ಧಾಂತವನ್ನು, ಲಿಂಗಾಂಗ ಸಾಮರಸ್ಯದ ಮಹತ್ವವನ್ನು ಬಹುಮನೋಹರವಾಗಿ ನಿರೂಪಿಸಿದ್ದಾನೆ. ಸ್ವಲ್ಪ ಮಟ್ಟಿಗೆ ಗಡುಸಾಗಿ ತೋರಿದರೂ, ಸ್ವಲ್ಪಶ್ರಮವಹಿಸಿದರೆ ಅವುಗಳ ಸ್ವಾರಸ್ಯವನ್ನು ಮನಸಾರೆ ಸವಿಯಬಹುದು. ಅವನ ಶೈಲಿಯನ್ನು ನಾರಿಕೇಳಪಾಕಕ್ಕೆ ಹೋಲಿಸಬಹುದು. ಇಲ್ಲೊಂದು ವಚನ ಹೀಗಿದೆ :

"ಮೂರುಗಳಿಗೆಯನೊಂದು ಗೂಡಿ,
ಹೊರೆಯಲ್ಲಿಐದು ಕತ್ತರಿಸಲಾಗಿ ಆರು ಹೋಯಿತು.
ಆರಕ್ಕೆ ಮೂರು ಪ್ರತಿಯನಿಕ್ಕಲಾಗಿ
ಸೂಜಿಯ ಮೊನೆಯ ಕೊನೆಯಲ್ಲಿ
ಆರಡಗಿ ಮೂರೊಡಗೂಡಿದವು.
ಮೀರಿ ಹೊಲಿಯುವುದಕ್ಕೆ ಒಳಗೂಡುವಹೋಳಕಾಣೆ
ಇಂತೀ ಗುಣವಡಗಿದ ಪುತ್ತ
ಷಟುಸ್ಥಲ ತ್ರಿವಿಧ ಕೂಟ
ಪ್ರಸನ್ನ ಕಪಿಲಮಲ್ಲಿಕಾರ್ಜುನ ಲಿಂಗದಲ್ಲಿ ಒಡಗೂಡಿದೆ.

ವೀರಶೈವ ಧರ್ಮಸಿದ್ಧಾಂತವನ್ನು ಪ್ರತಿಪಾದಿಸುವ ಈ ವಚನತರ್ಕಬದ್ಧವಾಗಿದೆ, ಶಾಸ್ತ್ರೀಯವಾಗಿ ವಿವೇಚಿಸಲಾಗಿದೆ. ಮೊದಲು ಅಂಗ, ಜೀವ, ಆತ್ಮಗಳು ಇಷ್ಟ ಭಾವ ಪ್ರಾಣಗಳಾಗಬೇಕು, ಅಂದರೆ ಮಾನವನು ಮೊದಲು ಶರಣನಾಗಬೇಕು. ಮನಸ್ಸಲ್ಲಿ ಮೊದಲು ಸುಜ್ಞಾನ ಅರಳಬೇಕು. ಅದು ಸುಪ್ತವಾಗಿರುತ್ತದೆ. ಬೂದಿ ಮುಚ್ಚಿದಕೆಂಡದಂತಿರುತ್ತದೆ. ತನ್ನ ಬಿಟ್ಟು ದೇವರಿಲ್ಲ ಮಣ್ಣು ಬಿಟ್ಟು ಮಡಿಕೆಇಲ್ಲವೆಂಬ ಗಾದಿಯ ಮಾತು ವೇದಕ್ಕೆ ಸರಿಯಾಗಿದೆ ಈ ದಿಶೆಯಲ್ಲಿ ಆತ್ಮಸಾಕ್ಷಾತ್ಕಾರಕೆ ಸಂಸ್ಕಾರಕ್ಕೆ ವಿಧಿ ವಿಧಾನಗಳು ನಡೆಯಲೇಬೇಕು. ಆದುದರಿಂದ ಶ್ರೀಗುರುವು ಅಂತಃಕರಣದಿಂದ ಹಸ್ತಮಸ್ತಕ ಸಂಯೋಗದಿಂದ ವೇಧಾದೀಕ್ಷೆ, ಮಂತ್ರದೀಕ್ಷೆ, ಕ್ರಿಯಾದೀಕ್ಷೆಯಿಂದ ತನ್ನ ತನು ಮನ ಭಾವಗಳಲ್ಲಿ ಮರೆತುನಿಂತ ಆಣವಮಲ, ಮಾಯಾಮಲ, ಕಾರ್ಮಿಕ ಮಲಗಳನ್ನು ನಷ್ಟಮಾಡಿ ಸುಟ್ಟುಹಾಕಿ ಅಷ್ಟಮದಗಳನ್ನು ಮೆಟ್ಟಿನಿಂತು ಅಲ್ಲಿ ಇಷ್ಟ, ಪ್ರಾಣ, ಭಾವನೆಗಳನ್ನು ಮಾಡಿಸಿಕೊಳ್ಳಬೇಕು. ಈ ಸೂತ್ರವನ್ನು ಮೂರುಗಳಿಗೆಯ ನೊಂದು ಗೂಡಿ ಎಂಬುದಾಗಿ ಸುಂದರವಾಗಿ ಬಂಧುರವಾಗಿ ತನ್ನ ವಚನದಲ್ಲಿ ಪ್ರೋಣಿಸಿದ್ದಾನೆ. ಕ್ರಿಯಾಜ್ಞಾನ ಸಮಸಮುಚ್ಚಯ ಸುಂದರಸಮನ್ವಯ ಸಾಧಿಸಿದ್ದಾನೆ.

ತನ್ನ ಹೊಲಿಯುವ ಕಾಯಕದ ಪರಿಸರ ಪರಿಕರಗಳನ್ನು ಸಮಯೋಚಿತವಾಗಿ ಬಳಸಿಕೊಳ್ಳುವ ಚಿತ್ರವಿಚಿತ್ರವಾದ ಅವನ ವಚನಗಳಲ್ಲಿ ಚನ್ನಾಗಿ ವ್ಯಕ್ತವಾಗಿರುವುದು ಗಮನಾರ್ಹವಾಗಿದೆ. ಹೊಲಿಯುವ ಕಾಯಕದಲ್ಲಿ ನಿರತನಾದವನಿಗೆ ಅರಿವೆಯನ್ನು ಅಳತೆಗೆ ಸರಿಯಾಗಿ ಮಡಚುವುದು ಸರಿಯಾಗಿ ಕತ್ತರಿಸುವುದೇ ಆಗಿದೆ, ಈ ಕೃತಿಗಳು ಸಹಜವಾಗಿ ಸಮರ್ಥ ಸಿಂಪಿಗರಲ್ಲಿ ನಡೆಯುತ್ತಲೇ ಇರುತ್ತವೆ. ಆದರೆ ಈ ಕ್ರಿಯೆಗಳನ್ನು ಧರ್ಮಸಿದ್ಧಾಂತಕ್ಕೆ ಷಟ್‌ಸ್ಥಲ, ಅಷ್ಟಾವರಣ ಪಂಚಾಚಾರಗಳಿಗೆ ಅನ್ವಯಿಸಿ ಹೇಳುವ ಕುಶಲ ಕಲೆ ಅನುಭಾವಿಗಳಾದ ಶರಣರಿಗೆ ಸಾಧಿಸಿತ್ತು, ಸಿದ್ಧಿಸಿತ್ತು, ರಕ್ತ-

ರಕ್ತಗತವಾಗಿತ್ತು. ಭಕ್ತಿ, ಜ್ಞಾನ, ವೈರಾಗ್ಯ ಮುಪ್ಪುರಿಗೊಂಡು ಅದ್ಭುತ ಫಲವಂದು ಸೂಜಿಯ ಮೊನೆಯು, ಕೊನೆಯಲ್ಲಿ ಅರಡಗಿ ಮೂರೂಗೂಡಿದವು ಎಂಬ ಪ್ರತಿಮೆ ಸೊಗಸಾಗಿ ಮೂಡಿದೆ.

" ಮುಗಮೊಂದು ವಚನವಿದು
ಹರಿಹತ್ತು, ಹೊಲಿವುದೊಂದೆ ಸೂಜಿ
ಸೆರಗೆಂಟು, ಮುಡಿಸುವುದೊಂದಕ್ಕೆ
ಅಡಿಯಾರ, ನಡೆವುದೊಂದೆ ಕಾಲು
ನುಡಿ ಮೂರು, ಅರಿವುದೊಂದೆ ಆತ್ಮ
ಇಂತೀ ಒಂದರೊಳಗೊಂದಡಗಿ ಸಂದಿಲ್ಲದ ನೂಲ
ಮಾಲೆಯು ಗಂಮನಿಕ್ಕಿ, ಒಂದಕ್ಕೆ ಮೂರು ಅಮೂರಕ್ಕಾರು
ಆ ಆದರೆ ವಿಭಾಗಿಸಿ ಮೂವತ್ತಾರ ಬೇರಿರಿವ
ಇಪ್ಪತ್ತೈದ ಮೀರಿಕಾವ ನೂರೊಂದರಲ್ಲಿ ಸೊರೆ ಹೋಗದ
ತನಗೊಂದು ತೋರಿದಲ್ಲಿಯೆ
ಊರೆಲ್ಲಕ್ಕೂ ದೂರದೆ ಪ್ರಸನ್ನ ಕಪಿಲ ಸಿದ್ಧ ಮಲ್ಲಿಕಾರ್ಜುನಲಿಂಗವನೊಡ
ಗೂಡಬೇಕು

ನೂರೊಂದು ಸ್ಥಳಗಳನ್ನು ವಿಶ್ಲೇಷಿಸುವ ಈ ವಚನ ಅತಂತ್ಯ ವೈಜ್ಞಾನಿಕವಾಗಿದೆ ತರ್ಕಬದ್ಧವಾಗಿದೆ.

ಶಿವಾನುಭವ ರಹಸ್ಯವನ್ನು ನಿವೇದಿಸಿದ ಇನ್ನೊಂದು ವಚನ ಹೀಗಿದೆ.

ಬ್ರಹ್ಮಂಗಂಟುದಾರ, ವಿಷ್ಣುವಿಂಗು ಭಯದ ಹೂಲಿಗೆ
ರಉದ್ರಂಗೆಟಬ್ಬಿ, ಮಿಕ್ಕಾದ ದೇವ ಕುಲಕ್ಕೆಲ್ಲಕ್ಕೂ
ಅಲ್ಲಲ್ಲಿಗೆ ಕಲ್ಲಿಯ ಹೊಲಗೆ,
ಈ ಗುಣವ ಬಲ್ಲವರೆಲ್ಲರು
ಪ್ರಸನ್ನ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವ ಬಲ್ಲವರಹರು.

ರಜೋಗುಣ ಸಂಬಂಧವಾದ ಸ್ಥೂಲ ದೇಹಕ್ಕೆ ಅಚಾರವನಗಳವಡಿಸಿ ಇಷ್ಟಲಿಂಗ ಸಂಬಂಧ ಮಾಡಿ ಸತ್ವಗುಣ ಸಂಬಂಧಮಾಡಿ ಸೂಕ್ಷ್ಮ ದೇಹಕ್ಕೆ ಕ್ರಿಯಾ ಜ್ಞಾನು ಗಳಳವಡಿಗೆ ಪ್ರಾಣಲಿಂಗ ಸಾಹಿತ್ಯವ ಮಾಡಿ, ತಮೋಗುಣ ಸಂಬಧವಾದ ಕಾರಣ ದೇಹಕ್ಕೆ ಮಹಾಜ್ಞಾನವ ನೆಲೆಗೊಳಿಸಿ ಭಾವಲಿಂಗದ ಸಂಬಂಧವಮಾಡಿ ಈತ್ರಿವಿಧರೆಂಬ ಸಂಬಂಧವಾದ ಶರಣನ ಇಂದ್ರಿಯಂಗಳೆಲ್ಲ ಮಂತ್ರಲಿಂಗ ಸಂಬಂಧಮಾಡುವ ನೆಲೆಕಲೆಗಳನ್ನು ಇಲ್ಲಿ ಜಾಣ್ಮೆಯಿಂದ ವಿಶ್ಲೇಷಿಸಲಾಗಿದೆ. ಪ್ರತಿಪಾದಿಸಲಾಗಿದೆ.

ಇನ್ನೊಂದು ಚಮತ್ಕಾರ ರೀತಿಯಲ್ಲಿ ನಿರೂಪಿಸಿದ ವಚನ:

"ತಲೆಗೆ ಮೂರು ಚಿಪ್ಪು ಲಿಂಗಕ್ಕೆ ಆರು ಚಿಪ್ಪು
ಮಿಕ್ಕಾದ ಸರ್ವಾಂಗಕೆಲ್ಲವೂ ಒಂದೇ ಚಿಪ್ಪಿನ ಕುಪ್ಪಸ
ಇದರಂಗದ ಆಚರಣೆಯ ಬಲ್ಲವ
ಪ್ರಸನ್ನ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವಬಲ್ಲವ"

ಶರಣನ ಅಂಗಗಳೆಲ್ಲವೂ ಲಿಂಗಮಯವಾಗಬೇಕೆಂಬ ವಿಚಾರವಿಲ್ಲಡೆ. ಅಂದಾಗ ಮಾತ್ರ ಶರಣ ಪದವಿಗೆ ಅರ್ಹನಾಗುತ್ತಾನೆ. ಈ ದಿಸೆಯಲ್ಲಿ 17 ನೆಯ ಶತಮಾನದಲ್ಲಿದ್ದ ಸಿಂಗಳದ ಸಿದ್ಧ ಬಸವದೇವರು ಇವನ ವಚನಗಳೆಲ್ಲವುಗಳಿಗೂ ವ್ಯಾಖ್ಯಾನ ಬರೆದಿರುವುದು ಜನತೆಗೆ ಪರಿಚಯ ಮಾಡಿಕೊಡುವ ದೃಷ್ಟಿಯಿಂದ ಕೆಲವು ಮಾತುಗಳನ್ನು ಮಾತ್ರ ಇಲ್ಲಿ ಲೇಖಿಸುವ ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಓರ್ವ ಸಾಮಾನ್ಯ ದರ್ಜಿಯೂ ಕೂಡ ಮನಸ್ಸು ಮಾಡಿದರೆ ಶ್ರೇಷ್ಠ ಶಿವಶರಣ ಪದವಿ ಪಡೆಯಬಹುದಾಗಿದೆ. ಮಾನವೀಯ ಚಿಂತನ ಮೌಲ್ಯಗಳಲ್ಲಿ ಒಂದಾದ ಕಾಯಕ ತತ್ವದ ವಿಜಯ ಪತಾಕೆಯನ್ನು ಎತ್ತಿ ಹಿಡಿಯಬಹುದಾಗಿದೆ. ಸೂಜಿಕಾಯಕದಲ್ಲಿ ನಿರತನಾದ ರಾಮಿತಂದೆ ಎಲ್ಲರಿಗೂ ಹಿರಿಯನಾಗಿ ಗೌರವ ಘನತೆಯಿಂದ ಮನ್ನಣೆ ಪಡೆದಿದ್ದಾನೆ. ಶರಣ ಸಿದ್ಧಾಂತದಲ್ಲಿ ನೀತಿಗೆ ಪ್ರಾಶಸ್ತ್ಯವಿದೆ. ಜಾತಿಯ ವಿಷಕ್ರಿಮಿಯನ್ನೇ ತೊಡೆದು ಹಾಕಿದವರು, ನಮ್ಮವರು ಪ್ರಾಜ್ಞರಾದರು ಅನುಭವಿಗಳಾದವರು ಸೂಜಿಕಾಯಕದ ರಾಮಿತಂದೆಯ ವಚನಗಳಿಗೆ ವಿಶೇಷ ವ್ಯಾಖ್ಯಾನ ಮಾಡುವುದು ಸಾಧ್ಯವಿದೆಯೆಂಬುದನ್ನು ನಮ್ರತೆಯಿಂದ ಸೂಚಿಸಬಯಸುತ್ತೇನೆ.

ಹೆಚ್ಚಿನ ವಿವರಣೆಗಾಗಿ ಪ್ರೊ. ಎಸ್. ಎಸ್. ಭೂಸರಡ್ಡಿಯವರು ಸಂಪಾದಿಸಿದ "ಸೂಜಿಕಾಯಕದ ರಾಮಿತಂದೆಯ ವಚನಗಳು" ಎಂಬ ಕೃತಿಯನ್ನು ನೋಡಬಹುದು

## ಗ ಮ ನಿ ಸಿ ರಿ.

**ಮಾನ್ಯ ಸದಸ್ಯರುಗಳು ಆಗಿಂದಾಗ್ಗೆ ತಮ್ಮ ಬದಲಾದ ವಿಳಾಸಗಳನ್ನು ಕಾರ್ಯಾಲಯಕ್ಕೆ ತಿಳಿಸುವುದರಿಂದ ಮುಂಬೇನ "ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕೆಂದು ಕೋರುತ್ತೇವೆ.**

ಪ್ರಕಾಶಕರು.

# ಮಲೆನಾಡಿನಲ್ಲಿ ಶ್ರೀ ಬಸವಜಯಂತಿ ಮತ್ತು ಸಾಮೂಹಿಕ ವಿವಾಹ

ಶ್ರೀ ಸಿದ್ದೇಶ್ ಬಿ.ಇ., (ಸಿವಿಲ್)

ಪ್ರಕೃತಿ ದೇವತೆಯ ಅಚ್ಚ ಹಸಿರಿನ ಮಡಿಲಾಗಿರುವಂತಹ ಮಲೆನಾಡಿನ ಸಕಲೇಶಪುರ ಮತ್ತು ಸುತ್ತಮುತ್ತಲಿನ ಗ್ರಾಮದ ಬಂಧುಗಳಿಗೆ ದಿ॥ 19-4-90ನೇ ಗುರುವಾರ ಒಂದು ಸಂಭ್ರಮದ ಸುದಿನ. ಈ ಸುದಿನದಂದು ಮಲೆನಾಡಿನ ವೀರಶೈವ ಸಮಾಜದವತಿಯಿಂದ ಹಮ್ಮಿಕೊಂಡಿದ್ದ ಕಾರ್ಯಕ್ರಮ ಶ್ರೀ ಬಸವಜಯಂತಿ ಮತ್ತು ಸಾಮೂಹಿಕ ವಿವಾಹ ಸಮಾರಂಭ. ಅಂದು ಬೆಳಿಗ್ಗೆ ಸಕಲೇಶಪುರದ ಬೀದಿ ಬೀದಿಗಳನ್ನು ತೊಳೆದು ರಂಗೋಲಿ ಇಟ್ಟು ಶೃಂಗರಿಸಲಾಗಿತ್ತು. ಎಲ್ಲೆಲ್ಲಿಯೂ ಸಡಗರ ತುಂಬಿ ತುಳುಕುತಿತ್ತು (ಇತ್ತ 18-4-90ರಂದು ಸಂಜೆ 25 ಜೊತೆ ವಿವಾಹದ ಪ್ರಯುಕ್ತ ವಧುವಿನ ಕಡೆಯವರು ಮತ್ತು ವರನ ಕಡೆಯವರು ಆಗಮಿಸಿದ್ದರು ದಿ॥ 18-4-90 ಸಂಜೆ 4 ಗಂಟೆಗೆ ಬಸವಜಯಂತಿ ಕಾರ್ಯಕ್ರಮ ಮುನ್ನಾದಿನದ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು ) ತಳಿರು ತೋರಣದಿಂದ ಶೃಂಗರಿಸಲಾಗಿದ್ದ ಬೀದಿಗಳು ಸಕಲೇಶಪುರಕ್ಕೆ ಬಂದಂತಹ ಎಲ್ಲರನ್ನ ಸ್ವಾಗತಿಸುತಿದ್ದವು ಶ್ರೀ ಸಿದ್ಧಗಂಗಾ ಶ್ರೀಗಳವರು ಬೆಳಿಗ್ಗೆ 9ಕ್ಕೆ ದಯಮಾಡಿಸಿದರು ಬೆಳಿಗ್ಗೆ 8-10 ರಿಂದ 9-10 ರವರೆಗೆ 25 ಜೊತೆ ಸಾಮೂಹಿಕ ವಧು-ವರರ ವಿವಾಹ ಕಾರ್ಯಕ್ರಮ ಸಡಗರದಿಂದ ಜರುಗುತ್ತ. ಬೆಳಿಗ್ಗೆ 9 - 30 ಕ್ಕೆ ಬಸವಜಯಂತಿ ಕಾರ್ಯಕ್ರಮವನ್ನ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರಿಂದ ಉದ್ಘಾಟಿಸಲಾಯಿತು. ಆನಂತರ 10 ಗಂಟೆಗೆ ಶ್ರೀ ಶ್ರೀಗಳವರು ನವ ವಧು-ವರರನ್ನು ಆಶೀರ್ವದಿಸಿದರು 10-30ಕ್ಕೆ ಶ್ರೀ ಬಸವೇಶ್ವರರ ಭಾವ ಚಿತ ದ ಮೆರವಣಿಗೆಯು ಮಂಗಳವಾದ್ಯ, ಶ್ರೀ ಹೆಚ್. ಎಸ್. ನೀಲಕಂಠಯ್ಯನವರ ವೀರಗಾಸೆ ಕುಣಿತ, ಸುಮಂಗಳಿಯರು ಹೊತ್ತ ಕಳಶಗಳು, ಜೊಡೆತ್ತುಗಳು ಸಹಸ್ರರು ಜನಗಳಿಂದ ಕೂಡಿದ ಈ ಮೆರವಣಿಗೆಯು ಸಕಲೇಶಪುರದ ರಾಜ ಬೀದಿಗಳಲ್ಲಿ ಹಾದು ಬಂದಿತು. ಮದ್ಯಾಹ್ನ ಎಲ್ಲ ಬಂಧುಗಳಿಗೂ ಪ್ರಸಾದದ ವ್ಯವಸ್ಥೆ ಮಾಡಲಾಗಿತ್ತು. ಮದ್ಯಾಹ್ನದ ಅಧಿವೇಶನಕ್ಕೆ ಬಂದಿದ್ದ ಎಲ್ಲಾ ಅತಿಥಿಗಳಿಗೂ ತುಂಬು ಹೃದಯದ ಅತಿಥಿಸತ್ಕಾರ ನೀಡಿದವರು ಬ್ಯಾಕರವಳ್ಳಿ ಶ್ರೀ ಜಯಣ್ಣನವರು.

ಎಲ್ಲಾ ಭಕ್ತಾದಿಗಳ ಪ್ರಸಾದದ ನಂತರ 4 ಗಂಟೆಗೆ ಸರಿಯಾಗಿ ಗುಡುಗು ಮಿಂಚುಗಳ ಜೊತೆಯಲ್ಲಿ ಬಸವಜಯಂತಿ ಕಾರ್ಯಕ್ರಮದ ಅಧಿವೇಶನ ಶ್ರೀ ಸಿದ್ದೇಶ್‌ರವರ ನಿರೂಪಣೆಯೊಂದಿಗೆ ಪ್ರಾರಂಭವಾಯಿತು. ಪ್ರಾರ್ಥನೆ ಹಾಡಿದರು ಶ್ರೀಮತಿ ಗಾಯಿತ್ರಿ ರತ್ನಕರ, ಸ್ವಾಗತಕೋರಿದರು ಬಿ. ಎಸ್. ನಾಗರಾಜ್, ಸ್ವಾಗತ ಗೀತೆಯನ್ನ ಹಾಡಿದರು ಶ್ರೀಮತಿ ನಾಗಲಕ್ಷ್ಮಿಯವರು, ಸಮಾರಂಭದ ಉದ್ಘಾಟನೆ

ಮಾಡಿದರು ಕಲ್ಲುಮಠದ ಶ್ರೀ ಶ್ರೀ ಮಹಂತಸ್ವಾಮಿಗಳು. ಅನಂತರ ವಚನ ಗಾಯನ ಮಾಡಿದರು ಕುಮಾರಿ ಸತ್ಯವತಿ ಮತ್ತು ಸಂಗಡಿಗರು, ಅನಂತರ ಸಾರ್ವಜನಿಕ ಕ್ಷೇತ್ರದಲ್ಲಿ ಸೇವೆಸಲ್ಲಿಸಿದ ಗಣ್ಯರುಗಳಾದ ಶ್ರೀ ಕೆ.ಎಂ. ರುದ್ರಪ್ಪ, ಶ್ರೀ ಜೆ ಡಿ. ಸೋಮಪ್ಪ ಶ್ರೀ ಬಿ. ಡಿ .ಬಸವರಾಜು, ಶ್ರೀ ಬಿ ಕಾಂತರಾಜು. ಶ್ರೀ ಎಂ. ಎ. ಶಿವಪುತ್ರಪ್ಪನವರು, ಶ್ರೀ ಎಸ್. ಬಿ ಮಹಂತಗೌಡರು, ಶ್ರೀ ಬಿ. ಪಿ. ಐಸಾವಿ.ಗೌಡರು, ಇವರುಗಳಿಗೆ ಶ್ರೀಗಳವರಿಂದಸನ್ಮಾನಿಸಲಾಯಿತು. ಗಣ್ಯರುಗಳ ಪರಿಚಯಿಸಿದವರು ಶಾಪ್ ಸುಬ್ಬಾಪ್. ಶ್ರೀ ಬಿ. ಬಿ. ಶಿವಪ್ಪನವರು, ವಿಧಾನ ಪರಿಷತ್ ಸದಸ್ಯರು. ಶ್ರೀ ಬಿ ಆರ್ ಗುರುದೇವ್ ಶಾಸಕರು, ಶ್ರೀ ಬಿ. ಶಿವಕುಮಾರ್ ಇವರುಗಳು ಸಭೆಯನ್ನುದ್ದೇಶಿಸಿ ಮಾತನಾಡಿದರು, ಅನಂತರ ಶ್ರೀಮತಿ ಗಂಗಾಂಬಿಕೆಯವರು ಬಸವಣ್ಣನವರನ್ನು ಕುರಿತು ಉಪನ್ಯಾಸ ವಿತ್ತರು. ಶ್ರೀ ಕೆ. ಆರ್. ಲಿಂಗಪ್ಪನವರು ಮತ್ತು ಶ್ರೀ ಹೆಚ್. ವಿ ವೀರಭದ್ರಯ್ಯ ನವರು ಜಾನಪದ ಗೀತೆಗಳೊಂದಿಗೆ ಉಪನ್ಯಾಸವಿತ್ತರು. ಕೊನೆಯಲ್ಲಿ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಆಶೀರ್ವಚನ ನೀಡುತ್ತ, ಇಂದು ಸಮಾಜದ ಎಲ್ಲಾ ಕ್ಷೇತ್ರಗಳಲ್ಲೂ ಅಶಾಂತಿ ಮೂಡಿದೆ. ಬಸವಣ್ಣನವರ ಕಾಯಕತತ್ವಗಳನ್ನು ಅನುಸರಿಸಿದಾಗ ಮಾತ್ರ ನಿರ್ಮಲವಾತಾವರಣ ಉಂಟಾಗಿ ಬಡವ ಬಲ್ಲಿದ ಭೇದ ಭಾವವಳಿದು ಸುಖಿ ಸಮಾಜದ ನಿರ್ಮಾಣವಾಗುತ್ತದೆ ಇಂದು ಕೆಳಸ್ತರದಲ್ಲಿರುವ ದುರ್ಬಲರನ್ನು ಮೇಲೆತ್ತುವ ಹೊಣೆಗಾರಿಕೆ ಉಳ್ಳವರಿಂದ ಆಗಬೇಕಾಗಿದೆ, ಈದಿಸೆಯಲ್ಲಿ ಸಮಾಜದ ಮುಂದಾಳುಗಳು. ರಾಜಕಾರಣಿಗಳು, ಅಧಿಕಾರಿಗಳು, ತ್ಯಾಗ ಪ್ರವೃತ್ತರಾಗಿ, ನಿಸ್ಪೃಹರಾಗಿ, ಅವರವರ ಕ್ಷೇತ್ರದಲ್ಲಿ ಶ್ರೀ ಸಾಮಾನ್ಯನ ಕುಂದು ಕೊರತೆಗಳ ಬಗ್ಗೆ ಜಾಗ್ರತೆವಹಿಸಿ, ಅವನ ಬದುಕಿಗೆ ದಾರಿ ತೋರಿಸಬೇಕು, ಇಂದು ಮಾದಕ ದುಶ್ಚಟಗಳಿಗೆ ಬಹುಮಂದಿ ಬಲಿಯಾಗಿದ್ದಾರೆ. ಇದು ತುಂಬಾ ದುಃಖಕರ, ಅಷ್ಟೇಅಲ್ಲ ಸರ್ವವಿನಾಶಕಾರಕ. ರಾಷ್ಟ್ರ ಇಂದು ಎದುರುಸುತ್ತಿರುವ ಅನೇಕ ಸವಾಲುಗಳಿಗೆ ಪ್ರತಿಯೊಬ್ಬರೂ ಚಿಂತನ ಶೀಲರಾಗ ಬೇಕಾಗಿದೆ. ಪವ್ವರೂ ಸಮರ್ಪಣಾ ಭಾವದಿಂದ ದೇಶದ ಐಕ್ಯತೆಗೆ ಧ್ವನಿಗೂಡಿಸ ಬೇಕಾಗಿದೆ. ಇದು ಸರ್ವಕಾಲ, ವಿದೇಶಿ ಶಕ್ತಿಗಳಿಗೆ ಒಕ್ಕೊರ್ಲಿನ ಸಂಘ ಶಕ್ತಿಯನ್ನು ತೋರಿಸಿಕೊಟ್ಟು. ರಾಷ್ಟ್ರದ ಅಖಂಡತೆಗೆ ಸೇವೆಸಲ್ಲಿಸಲು ಬದ್ಧಕಂಕಣರಾಗಬೇಕು. ಎಂದು ನುಡಿದರು ಶ್ರೀ ಹೆಚ್. ಪಿ. ಕಾಂತರಾಜ್ ವಂದನಾರ್ಪಣೆ ಮಾಡಿದರು. ಮಂಗಳದೊಡನೆ ಕಾರ್ಯ ಕ್ರಮ ಮುಕ್ತಾಯವಾಯಿತು.

ರಾತ್ರಿ 9 - 30 ಕ್ಕೆ ಸರಿಯಾಗಿ ಎಲ್ಲ ಬಂಧುಗಳ ಪ್ರಸಾದದನಂತರ ಶ್ರೀ ಜಗಜ್ಯೋತಿ ಬಸವೇಶ್ವರರ ನಾಟಕ ಪ್ರಾರಂಭವಾಯಿತು. ಆರು ಸಹಸ್ರಕ್ಕೂ ಮೇಲ್ಪಟ್ಟು ಅಭಿಮಾನಿಗಳು ನಾಟಕವನ್ನು ನೋಡಿ ಸಂತೋಷಿಸಿದರು. ಬೆಳಗ್ಗೆ 5–30ಕ್ಕೆ ನಾಟಕ ಮುಕ್ತಾಯವಾಯಿತು.

## ದೆಹಲಿಯಲ್ಲಿ ಬಸವ ವಿಗ್ರಹ ಪ್ರತಿಷ್ಠಾಪಿಸಲು ಕನ್ನಡಿಗರ ಒತ್ತಾಯ

ಕರ್ನಾಟಕದ ಸಾಮಾಜಿಕ ಕ್ರಾಂತಿ ಪುರುಷ ಬಸವೇಶ್ವರರ ವಿಗ್ರಹವನ್ನು ದೆಹಲಿ ಆಡಳಿತವು ದೆಹಲಿಯ ಮುಖ್ಯ ಸ್ಥಳದಲ್ಲಿ ಪ್ರತಿಷ್ಠಾಪಿಸಿಸಬೇಕೆಂದು ದೆಹಲಿ ಕನ್ನಡಿಗರು ಆಡಳಿತವನ್ನು ಒತ್ತಾಯಿಸಿದ್ದಾರೆ.

'ದೆಹಲಿ ಕನ್ನಡಿಗ' ಪತ್ರಿಕೆ ಎಪ್ರಿಲ್ 28 ರಂದು ಏರ್ಪಡಿಸಿದ್ದ ಬಸವಜಯಂತಿ ಕಾರ್ಯಕ್ರಮವನ್ನು ಉದ್ಘಾಟಿಸಿದ ಸಾಹಿತಿ ಮತ್ತು ಪತ್ರಕರ್ತ ಬಾ. ಸಾಮಗ ಅವರು ಹೊಸ ಸಮಾಜಿಕ ಕಾಂತ್ರಿಯನ್ನುಂಟು ಮಾಡಿದ ಬಸವಣ್ಣ ಅವರ ತತ್ವಗಳು ಕರ್ನಾ-ಟಕದ ಹೊರಗಡೆಯೂ ಪ್ರಚಾರವಾಗಬೇಕಾಗಿದೆಯೆಂದರು. 'ದೆಹಲಿಯಲ್ಲಿ ಬಸವಣ್ಣ ಅವರ ವಿಗ್ರಹವನ್ನು ಸರಕಾರ ಪ್ರತಿಷ್ಠಾಪಿಸದಿದ್ದಲ್ಲಿ ಕನ್ನಡಿಗರು ಹೋರಾಟಕ್ಕಿಳಿಯು ವುದಾಗಿಯೂ ಹೇಳಿದ ಸಾಮಗ ಅವರು ಬಸವಣ್ಣನವರ ಆರ್ಥಿಕ ವಿಚಾರಗಳನ್ನು ಪ್ರಚಾರಕ್ಕೆ ಹಾಗೂ ಅನುಷ್ಠಾನಕ್ಕೆ ತಂದರೆ ಭಾರತದ ಪ್ರಗತಿ ಸಾಧ್ಯವೆಂದರು.

ದಲಿತ ಹೋರಾಟಗಾರ ಶಂಕರ ವೈ. ಕುಂದರಗಿ ಅವರು ಕೆಳವರ್ಗದವರ ಪ್ರಗತಿಗಾಗಿ ಬಸವಣ್ಣನವರು ನೀಡಿದ ಉಪದೇಶಗಳನ್ನು ಈಗ ಮರೆಯುತ್ತಿದ್ದಾರೆಂದರು ಎಂ. ಅಶ್ವಥ್ ಅವರು ಶಿವಶರಣರ ವಚನಗಳು ಕನ್ನಡ ಸಾಹಿತ್ಯವನ್ನು ಶ್ರೀಮಂತ ವಾಗಿಸಿವೆ ಎಂದರು. ಅಂಧ ಕಲಾವಿದೆ ಕು. ವಿ. ಕೆ. ನಂದಿನಿ ಅವರು ಸಾಮಾಜಿಕ ಕಟ್ಟುಪಾಡುಗಳನ್ನು ತೊರೆದು ಅಕ್ಕಮಹಾದೇವಿಯಂತಹ ಶಿವಶರಣೆಯರು ಟೀಕೆ-ಗಳಿಗೆ ಬೆದರದೆ ಮುಂದುವರಿದುದು ಮಹಿಳೆಯರಿಗೆ ಆದರ್ಶವಾಗಿದೆಯೆಂದರು. ಚಿತ್ರ ಕಲಾವಿದ ಭೀಮರಾವ್ ಮುರಗೋಡ ಅವರು ದೇವದಾಸಿಯಂತಹ ಪದ್ಧತಿ ಇನ್ನೂ ಉಳಿದುಕೊಂಡಿರುವುದು ಅಪಮಾನವೆಂದರು.

ಅಧ್ಯಕ್ಷತೆ ವಹಿಸಿದ್ದ ಕನ್ನಡಿಗರ ನಾಯಕ ಬಿ. ಬಾಲಚಂದ್ರ ಅವರು ಜಾತಿ ವಿರುದ್ಧ ಹೋರಾಡಿದ ಬಸವಣ್ಣನವರನ್ನು ಅವರ ಅನುಯಾಯಿಗಳು ಜಾತಿ ಹಿಡಿತ ದಲ್ಲಿರಿಸಿಕೊಂಡಿರುವುದು ಸರಿಯಲ್ಲವೆಂದರು. ಸಮಾಜದ ಸೇವೆಗಾಗಿಯೇ ರಾಜಕೀಯ ಮುಖಂಡರುಗಳು ದುಡಿಯಬೇಕೆಂದು ಕರೆ ನೀಡಿದ ಬಸವಣ್ಣನವರನ್ನು ಇಂದಿನ ರಾಜ ಕೀಯ ಧುರೀಣರು ಮರೆಯಬಾರದೆಂದ ಶ್ರೀ ಬಾಲಚಂದ್ರ ಅವರು ಬಸವಣ್ಣನವರ ತತ್ವಗಳು ಆಧುನಿಕ ಪ್ರಗತಿಪರರಿಗೂ ಹತ್ತಿರವಾಗಿವೆಯೆಂದರು. ಬಸವಣ್ಣನವರ ತತ್ವಪ್ರಚಾರಕ್ಕಾಗಿ ಎಲ್ಲ ಧಾರ್ಮಿಕ ಭಿನ್ನಾಭಿಪ್ರಾಯಗಳನ್ನು ಮರೆತು ದುಡಿಯ ಬೇಕೆಂದು ಶ್ರೀ ಬಾಲಚಂದ್ರ ಅವರು ಕರೆ ನೀಡಿದರು.

ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಪುಸ್ತಕ ಪ್ರದರ್ಶನವನ್ನೂ ಏರ್ಪಡಿಸಲಾಗಿತ್ತು

# ಪ್ರಭಾವ

'ಭಗಿನಿ' ಎನ್. ಎಸ್. ಅಶ್ವತ್ಥಲಕ್ಷ್ಮಮ್ಮ ಎಂ.ಎ., ಗುಬ್ಬಿ.

ಸಾಹಿತ್ಯ ಜೀವನದ ಪ್ರತಿಬಿಂಬ. ಸಾಹಿತ್ಯ ಬಿಟ್ಟು ಜೀವನವಿಲ್ಲ. ಜೀವನವಿಲ್ಲದ ಸಾಹಿತ್ಯವಿಲ್ಲ. ಅದು ಜನಜೀವನದ ದರ್ಪಣ, ಸಾಹಿತ್ಯ, ಸೂರ್ಯರಶ್ಮಿ ಇದ್ದಂತೆ. ಏಕೆಂದರೆ ಸೂರ್ಯನ ಕಿರಣಗಳು ಸೋಂಕದ ಸ್ಥಳವಿಲ್ಲ, ಎಲ್ಲಿಂದರಲ್ಲಿ ಒಳ-ಹೊರ, ಒಳ್ಳೆಯ-ಕೆಟ್ಟ, ದೊಡ್ಡ-ಚಿಕ್ಕ ಯಾವುದರ ಭೇದವೂ ಇಲ್ಲ, ಎಲ್ಲ ಸ್ಥಳಗಳಲ್ಲೂ ತನ್ನ ಪ್ರಕಾಶವನ್ನು ಬೀರಿ, ಅಲ್ಲಿನ ಪೂರ್ಣ ಚಿತ್ರವನ್ನು ಎತ್ತಿ ತೋರಿಸುತ್ತದೆ. ಬೆಳಕು ಚೈತನ್ಯದಾಯಕ ಪ್ರಕೃತಿಯ ಎಲ್ಲಾ ಬಗೆಯ ಜೀವಿಗಳಲ್ಲೂ ಬಾಳಿನ ಚೇತನವನ್ನು ಕತ್ತಲ ಭಯಾನಕ ಪರಿಸ್ಥಿತಿಯನ್ನು ದೂರ ಸರಿಸಿ, ನವ ಚೈತನ್ಯವನ್ನು ತುಂಬುತ್ತದೆ. ಇದು ಪ್ರತಿದಿನ, ಪ್ರತಿಯೊಂದು ಜೀವಿಯೂ ಕಾಣುವ ನಿತ್ಯ ಸತ್ಯ. ಜಗತ್ತಿನ ಎಲ್ಲ ಬಗೆಯ ವಹಿವಾಟಿಗೂ ಸೂತ್ರದಾರನಿದ್ದಂತೆ. ಇದು ಜೀವನದ ಬೆಳಕಿಗೆ, ಕಾಯಕಕ್ಕೆ ಚೈತನ್ಯಕ್ಕೆ ಮೂಲವಿದ್ದಂತೆ. ಹಾಗೆಯೇ ಬಾಳಿನ ಮಾನಸಿಕ ಚೈತನ್ಯ ಪ್ರಗತಿಗೆ ಸಾಹಿತ್ಯ ಅತಿಮುಖ್ಯ, ಇಂಥ 'ಸಾಹಿತ್ಯ ಸೂರ್ಯ'ನ ಪ್ರಭಾವ ಅತೀವ, ಅದ್ಭುತ ಅಗಮ್ಯ, "ರವಿ ಕಾಣದುದನ್ನು ಕವಿಕಾಣುತ್ತಾನೆ," ಎಂಬ ಅನುಭಾವಿಕ ವಾಕ್ಯ-ಸಾಹಿತ್ಯದ ಔನ್ನತ್ಯ, ಪ್ರಭಾವ. ಹಿರಿಮೆ, ಆದರಿಂದ ಜೀವನದ ಮೇಲೆ ಉಂಟಾಗುವ ಪ್ರಭಾವ ಪ್ರಾತಿನಿಧ್ಯಗಳ ಅರಿವು ದೃಗ್ಗೋಚರ.

ಚರಾಚರದ ಆಗುಹೋಗುಗಳಲ್ಲಿ, ನೋಟ ನಲಿವುಗಳಲ್ಲಿ ಪ್ರತಿಯೊಂದು ಜೀವಿಯ ಒಂದಲ್ಲ ಒಂದು ತೆರದಲ್ಲಿ ಭಾಗಿ, ಆದರೆ ಅವುಗಳಲ್ಲಿ ಮಾನವ ಚೇತನ ತನ್ನದೇ ಆದ ವಿಶಿಷ್ಟ ಶಕ್ತಿಯನ್ನು ಹೊಂದಿರುವ ಚೈತನ್ಯಗಳಲ್ಲಿ ಅಪೂರ್ವ ಶಕ್ತಿಯನ್ನು ಹೊಂದಿರುವ ಚೈತನ್ಯಗಳೇ ಕವಿಚೈತನ್ಯಗಳು. ಎಲ್ಲಾ ಮಾನವರಂತೆ ಅವನಿಗೂ ಆಸೆ ಆಕಾಂಕ್ಷೆ ಮುಂತಾದುವುಗಳಿದ್ದರೂ, ಅವುಗಳಲ್ಲಿ ವಿಶೇಷ ರೀತಿಯ ಪ್ರತಿಭೆ, ಪ್ರಭಾವ ಆಕಾಂಕ್ಷೆ-ಗಳನ್ನು ಹೊಂದಿರುತ್ತಾರೆ. ಇಂತಹ ವಿಶಿಷ್ಟ ಚೈತನ್ಯಗಳೇ ಕವಿಗಳು. ಸಾಮಾನ್ಯ ದೃಷ್ಟಿಕೋನದಿಂದ ದೂರ ಸರಿದು; ನೋಡಿದ, ಕೇಳಿದ, ಅನುಭವಿಸಿದ, ಜೀವನದ ಪ್ರಕೃತಿಯ ಪ್ರತಿವಸ್ತು, ರೀತಿ-ನೀತಿ, ಹಾವ-ಭಾವ ನೋಟ-ನುಡಿಗೆಗಳಲ್ಲೂ ವಿಶೇಷ-ಯನ್ನು ಕಾಣುತ್ತಾನೆ ಬಯಸುತ್ತಾನೆ, ಅದನ್ನೇ ಸಾಹಿತ್ಯದಲ್ಲಿ ಬಿಂಬಿಸುತ್ತಾನೆ ಇದು ಯಾರಿಂದ ಕೊಟ್ಟ ಕೊಡುಗೆಯಲ್ಲ, ನೀಡುವ ಉಡುಗೊರೆಯಲ್ಲ. ಅದು ಅಂತಃ ಪ್ರತಿಭೆಸುತ್ತಲ ಎಲ್ಲ ಸನ್ನಿವೇಶಗಳೂ ಅದಕ್ಕೆ ಸಹಕಾರಿಯಷ್ಟೆ. ಅದು ಅಂತಃ ಗಂಗೆಯಂತೆ. ಸಮಯ ಬಂದಾಗ, ಸ್ಥಳ ದೊರೆತಾಗ ತಾನೆ, ಹೊರಹೊಮ್ಮುತ್ತ ಸುತ್ತಲ ಪರಿಸರ ಆದಕ್ಕೆ ಉಚಿತ ರೀತಿಯಲ್ಲಿ ಪೋಷಕವಾದಾಗ, ಆಬಗ್ಗೆ ಹೊನಲಾಗಿ ನದಿಯಾಗಿ ಸಮುದ್ರವನ್ನು ಸೇರುವ ತವಕದಿ, ವಿಶಾಲ ಪಾತ್ರದಿಂದ ವಿಜೃಂಭಿಸಿ ಸೇರುವ ಶಕ್ತಿ ಪಡೆಯಬಹುದು. ಇದನ್ನು ಯಾರೂ ಅಲ್ಲಗಳೆಯುವಂತಿಲ್ಲ.

# ಗಂಗಾದೇವಿಯ ಮಧುರಾವಿಜಯ ಅಥವಾ ವೀರಕಂಪರಾಯಚರಿತ

ಎಂ. ಗೀತಾ ಉಪನ್ಯಾಸಕರು, 99, 9ನೇ ರಸ್ತೆ, ಸರಸ್ವತಿಪುರಂ, ಮೈಸೂರು-9.

ಬಾಹ್ಯಾಕಾಶದಲ್ಲಿ ಮಿನುಗುತ್ತಿರುವ ಸಾವಿರಾರು ಮಾಲೆಯ ಹಿನ್ನೆಲೆಯಲ್ಲಿ ನಮಗೆ ಕಾಣದ ಇನ್ನೂ ಅನೇಕ ನಕ್ಷತ್ರಗಳ ಅಸ್ತಿತ್ವವನ್ನು ವಿಜ್ಞಾನವು ತಿಳಿಸಿಕೊಟ್ಟಿದೆ. ಅಂತೆಯೇ ಈ ಬೃಹತ್ ಸಾಹಿತ್ಯಾಕಾಶದಲ್ಲಿ ಸುಪ್ರಸಿದ್ಧರಾದ ಕವಿ ಜ್ಯೋತಿಗಳ ಹಿಂದೆ ಇನ್ನೂ ಅನೇಕ ಕವಿಗಳು ಹಾಗೂ ಕವಯಿತ್ರಿಯರು ಸ್ವಲ್ಪಕಾಲವೇ ಮಾತ್ರ ಮಿನುಗಿ ಕಾಲಗರ್ಭದಲ್ಲಿನಶಿಸಿ ಹೋಗಿರಬಹುದು. ಈರೀತಿ, ಭೂಗರ್ಭದಲ್ಲಿ ಅಡಗಿರುವ ವಜ್ರವೈಢೂರ್ಯಗಳಂತೆ ಪ್ರಾಚೀನ ಸಂಸ್ಕೃತ ವಾಙ್ಮಯ ಗರ್ಭದಲ್ಲಿ ಮಹಿಳಾ ರತ್ನಗಳ ಕವಯಿತ್ರಿಯರ ಚರಿತ್ರೆಯು ಅಡಗಿರುವ ಅಂಶ ಕಂಡುಬರುತ್ತದೆ. ಆಗಿನ ಸ್ತ್ರೀಯರ ಸ್ಥಿತಿಗತಿಗಳು ಇಂದಿನವರಿಗಿಂತಲೂ ಚನ್ನಾಗಿಯೇ ಇದ್ದಿತೆಂಬುದು ಖಚಿತ ವಿಷಯವೇ ಆಗಿದೆ. ಸ್ತ್ರೀಯರಿಗೆ ವೇದಾಧಿಕಾರವೂ ಇದ್ದಿತೆಂಬುದು ಅವರು ಬರೆದಿರುವ ಸೂಕ್ತಿಗಳಿಂದ ಹಾಗೂ ಋಕ್ಕುಗಳಿಂದ ತಿಳಿದು ಬರುತ್ತದೆ.

ಋಗ್ವೇದದ ಪ್ರಾಚೀನ ಪುಟಗಳನ್ನು ತಿರುವಿಹಾಕಿದಾಗ, ಘೋಷಾ, ಗೋದಾ, ಲೋಪಾಮುದ್ರಾ, ಶಾಶ್ವಿತೀ, ವಾಗ್ದೇವೀಯೇ ಮೊದಲಾದ ಬ್ರಹ್ಮವಾದಿನಿಯರು ಚರ್ಚಿಸಿ ಮಥನ ಮಾಡಿದ ಅನೇಕ ಋಕ್‌ಗಳು ನಮ್ಮ ಕಣ್ಮುಂದೆ ಹಾದು ಮನವನ್ನು ತಾಕದೆ ಇರಲಾರದು. ವೇದಗಳಿಂದ ಇನ್ನು ಸ್ವಲ್ಪ ಮುಂದೆ ಕಣ್ಣಾಯಿಸಿದಾಗ ರಾಜಪುತ್ರಿಯರು, ಮಂತ್ರಿ ಸೇನಾಪತಿಯರ ಪುತ್ರಿಯರು, ವೇಶ್ಯೆಯರೂ ಕೂಡ ಶಾಸ್ತ್ರ ಪಾರಂಗತರಾಗಿದ್ದರೆಂದು ಹೇಳಿರುವ ವಾತ್ಸ್ಯಾಯನ ಕಾಮಸೂತ್ರವನ್ನು ನೋಡಬಹುದಾದೆ.

ಇದಲ್ಲದೆ "ಕವೀಂದ್ರವಚನ ಸಮುಚ್ಚಯ" ಸದೂಕ್ತಿ ಕರ್ಣಾಮೃತ 'ಸೂಕ್ತಿಮುಕ್ತಾವಲಿ' ಸುಭಾಷಿತಾವಲೀ, ಇವೇ ಮೊದಲಾದ ಗ್ರಂಥಗಳಲ್ಲಿ ಸುಮಾರು ಮೂವತ್ತೆರಡು ಜನಕವಯಿತ್ರಿಯರ ಬಿಡಿ ಪದ್ಯಗಳು ಉಲ್ಲೇಖಿತವಾಗಿರುವುದನ್ನು ಅವಲೋಕಿಸಬಹುದಾಗಿದೆ.

ಹೀಗೆ ಸ್ತ್ರೀಯರ ಕೈವಾಡ ಅಥವಾ ಬುದ್ಧಿಯ ಪ್ರಖರತೆ ಕೇವಲ ವೇದ ಸಾಹಿತ್ಯದಲ್ಲಿ ಮಾತ್ರವಲ್ಲದೆ ಲೌಕಿಕ ಸಾಹಿತ್ಯದಲ್ಲಿಯೂ ಅಪಾರವಾಗಿದ್ದಿತೆಂಬುದು ತಿಳಿದು ಬರುತ್ತದೆ. ವಾಗ್ದೇವಿಯು ಅದ್ವೈತ ಸಿದ್ಧಿ, ಗಾರ್ಗೀಹಾಗೂ ಮೈತ್ರೇಯಿಯರ ದಾರ್ಶನಿಕ ಜ್ಞಾನ 'ಆತ್ರೇಯಿಯ ಶಿಕ್ಷಾ ಪಟುತ್ವ' ಭಾರತೀದೇವಿಯ ಸಮಗ್ರ ವಿದ್ಯಾ ಪ್ರಪೂರ್ತಿ, ಲೀಲಾವತಿಯ ಗಣಿತ ಶಾಸ್ತ್ರ ಪ್ರಾವೀಣ್ಯತೆ, ಖನಳ, ಜ್ಯೋತಿಷ ವಿದ್ಯಾಪ್ರತಿಭೆ, ಮೈಜಯಂತಿಯ ಪಾಂಡಿತ್ಯೋತ್ಕರ್ಷ ಇದೆಲ್ಲವನ್ನೂ ಸಿಂಹಾವಲೋಕನ ಮಾಡಿದಾಗ ಸಾರಸ್ವತ ಪ್ರಪಂಚದಲ್ಲಿ ಪುರುಷರ ಸಮಾನವಾದ ಮೇಧಾಶಕ್ತಿಯು ಸ್ತ್ರೀಯರಿಗೂ ಇದ್ದಿತೆಂಬುದು ನಿರ್ವಿವಾದವಾದ ವಿಷಯವೇ ಆಗಿರುತ್ತದೆ.

ಇವೆಲ್ಲವನ್ನೂ ಪುಷ್ಟೀಕರಿಸಲೋಸುಗವೋ ಎಂಬಂತೆ " ಪುರುಷರಂತೆ ಸ್ತ್ರೀಯರೂ ಕವಿಗಳಾಗಬಹುದು. ಸಂಸ್ಕಾರವು ಆತ್ಮನಿಷ್ಠವೇ ಹೊರತು ಸ್ತ್ರೀ ಪುರುಷರೆಂಬ ಲಿಂಗ ಭೇದವನ್ನು ಅವಲಂಬಿಸುವುದಿಲ್ಲವೆಂದು ಹತ್ತನೇ ಶತಮಾನದಲ್ಲಿದ್ದ ರಾಜ-ಶೇಖರನು ಮೀಮಾಂಸೆಯಲ್ಲಿ ಸ್ಪಷ್ಟಪಡಿಸಿರುವುದಲ್ಲದೆ ಪ್ರಸಿದ್ಧ ಕವಿಶ್ರೇಷ್ಠನಾದ ಭವಭೂತಿಯು ಕೂಡ "ಗುಣಾಃ ಪೂಜಾಸ್ಥಾನಂ, ಗುಣಿಷು, ನಚಲಿಂಗಂ, ನಚವಯ; " ಎಂದು ಎಚ್ಚರಿಸಿದ್ದಾನೆ " ಈ ಒಂದು ಹಿನ್ನೆಲೆಯಲ್ಲಿ ಅತ್ಯಂತ ಪ್ರಸಿದ್ಧ ಕವಯಿತ್ರಿಯಾದ ಗಂಗಾಂಬಿಕೆಯ ಕಿರುಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ "

ಕಾವ್ಯದ ಆರಂಭಲ್ಲಿ. ಗಣೇಶ, ಪಾರ್ವತೀಪರಮೇಶ್ವರ ಇವರುಗಳ ವಂದನೆಯ ನಂತರಕ್ರಿಯಾ ಶಕ್ತಿ ಆಚಾರ್ಯರಿಗೆ, ನಮಿಸಿದ್ದಾಳೆ ನಂತರ ವಾಲ್ಮೀಕಿ, ವ್ಯಾಸ, ಕಾಳಿದಾಸ, ಬಾಣ, ಭಾರವೀ ದಂಡೀ, ಭವಭೂತಿ ಇವರುಗಳನ್ನು ಕೊಂಡಾಡಿರುತ್ತಾಳೆ. ' ಇದಲ್ಲದೆ ' ಅಗಸ್ತ್ಯ ಮತ್ತು ಗಂಗಾಧರ ಎಂಬ ಕವಿಗಳನ್ನು ಸ್ಮರಿಸಿ ನಾಟಕ ರೂಪದಲ್ಲಿ ಬರೆದಿರುವನೆಂದೂ ಅಗಸ್ತ್ಯನು ಹದಿನಾಲ್ಕುಕಾವ್ಯಗಳನ್ನು ಬರೆದಿರುವನೆಂದೂ ಅಗಸ್ತ್ಯನು ಹದಿನಾಲ್ಕು ಕಾವ್ಯಗಳನ್ನು ಬರೆದಿರುವನೆಂದೂ ತಿಳಿಸುತ್ತಾಳೆ. ಆದರೆ ಗಂಗಾಧರನೇ ಆಗಲೀ, ಅಗಸ್ತ್ಯನೇ ಆಗಲೀಯಾರು ಎಂಬುದನ್ನು ವಿಶದಪಡಿಸಿಲ್ಲ, ಕೊನೆಯಲ್ಲಿ ವಿಶ್ವನಾಥ ಕವಿಯನ್ನು ಹೊಗಳುತ್ತಾ ಅವನ ಕೃಪೆಯಿಂದ ತನಗೆ, ಸಾರ್ವಜ್ಞತ್ವವು ದೊರೆಯಿತೆಂದು ಹೇಳಿಕೊಳ್ಳುತ್ತಾಳೆ. ಇದರಿಂದ ಬಹುಶಃ ವಿಶ್ವನಾಥ ಕವಿಯು ಇವಳ ಗುರುವಾಗಿರಬಹುದೆಂದು ಊಹಿಸಲಾಗಿದೆ.

ಇನ್ನೂ ಕಾವ್ಯವು ಹೇಗಿದ್ದರೆ ಶ್ರೇಷ್ಠವು ಎಂಬ ವಿಷಯದಾಗಿ ತನ್ನದೇಆದ ಉದಾಹರಣೆಯಿಂದ ಪ್ರತಿಪಾದಿಸಿದ್ದಾಳೆ, ಕಾವ್ಯದಲ್ಲಿ ಕೇವಲ ದೋಷಗಳಿಲ್ಲದಿದ್ದರೆ ಸಾಲದು ಗುಣಗಳಿಂದಲೂ ಕೂಡಿರಬೇಕೆಂಬುದಕ್ಕೆ " ಪಾತಿವ್ರತಾಪಿ ಅರೂಪವತೀ-ಪರಿಣೇತ್ರೇನ, ರೋಚತೆ " ಎಂದರೆ ಪತಿನಿಷ್ಠೆಯಾದರೂ ರೂಪವತಿಯಲ್ಲದವಳು. ಪತಿಯುಮನಸ್ಸನ್ನು ಆಕರ್ಷಿಸಲಾರಳು ಎಂಬ ಉದಾಹರಣೆಯನ್ನು ಕೊಟ್ಟು. ತನ್ಮೂಲಕ ತನ್ನ ಕಾವ್ಯದಲ್ಲಿ ಆತ್ಮ ವಿಶ್ವಾಸವನ್ನು ತೋರಿಸಿಕೊಂಡಿರುತ್ತಾಳೆ' ಮತ್ತು "ಸ್ವಾದು ಪುಷ್ಪರಸಾಸ್ವಾದೇ, ಕ: ಪ್ರೇರಯುತಿಷಟ್ಪದಂ" ಮಧುರಪುಷ್ಪದರಸಾಸ್ವಾದನೆಗೆ ಭ್ರಮರವನ್ನುಯಾರೂ ಪ್ರಚೋದಿಸಬೇಕಾಗಿಲ್ಲ. ಎಂದು ತನ್ನಕಾವ್ಯದ ಶ್ರೇಷ್ಠತೆಯನ್ನು ಹೊಗಳಿದ್ದಾಳೆ

' ಸಮಸ್ತ ಸಾಮಂತ ಮಸ್ತಕನ್ಯಸ್ತ ಶಾಸನ " ನಾದಬುಕ್ಕರಾಯನು ರಾಜ್ಯವನ್ನಾಳುತ್ತಿದ್ದನೆಂದು ಕಾವ್ಯವು ಪ್ರಾರಂಭವಾಗುತ್ತದೆ, ಈ ಚಾರಿತ್ರಿಕ ಕಾವ್ಯವಾದ " ಮಧುರಾವಿಜಯ ಅಥವಾ ವೀರಕಂಪರಾಯ ಚರಿತ " ದ ಶ್ರೇಷ್ಠ ಕವಯಿತ್ರಿಯಾದ ಗಂಗಾದೇವಿಯ ಮಾತಾಪಿತೃಗಳಾರೆಂಬುದು ತಿಳಿದು ಬರುವುದಿಲ್ಲ; ಈ ಗ್ರಂಥದಲ್ಲಿ

ಒಂದು ಕಡೆ, ಕಂಪಣರಾಜನು ಗಂಗಾದೇವಿಗೆ ವಸಂತ ಋತುವಿನ ವರ್ಣನೆಯನ್ನು ಮಾಡೆಂದು ಹೇಳುವ ಸಂದರ್ಭದಲ್ಲಿ, "ಪ್ರಿಯದಯಿತಾ" ಎಂದು ಸಂಬೋಧಿಸಿರುವ ಪ್ರಯೋಗವು ಕಂಡುಬಂದಿರುವುದರಿಂದ ಗಂಗಾದೇವಿಯು ಕಂಪಣನರಾಯ (ನ) ಮಹಿಷಿಯಾಗಿರಬಹುದೆಂದು ತಿಳಿದುಬರುತ್ತದೆ' 'ಇದಲ್ಲದೆ' ಗ್ರಂಥದ ಕೊನೆಯಲ್ಲಿ "ಇತಿ ಶ್ರೀ, ಗಂಗಾದೇವ್ಯಾ ವಿರಚಿತೇ ಮಧುರಾ ವಿಜಯನಾಮ ವೀರಕಂಪರಾಯ ಚರಿತೇ........ಸಮಾಪ್ತಂ" ಎಂದಿದೆ. 'ಚಾರಿತ್ರಿಕವಾದ ಈ ಕಾವ್ಯವು ವೈದರ್ಭೀ ಶೈಲಿಯಲ್ಲಿದ್ದು ಅತ್ಯಂತ ಸರಳ ವಾಗಿದೆ' ಪ್ರತಿಸರ್ಗವೂ ವಿವಿಧವೃತ್ತಗಳಿಂದ ಕೂಡಿದೆ. ಕಾವ್ಯದಲ್ಲಿ ಒಂಭತ್ತು ಸರ್ಗಗಳಿದ್ದು ಮೊದಲನೆಯ ಐದು ಮತ್ತು ಏಳನೇ ಸರ್ಗವು ಪೂರ್ಣವಾಗಿದ್ದು 6, 8, 9, ನೇ ಸರ್ಗಗಳ ಕೆಲವು ಭಾಗ ದೊರೆಯುತ್ತವೆ. ಈ ಕಾವ್ಯದಲ್ಲಿ ಬರುವ ಘಟನೆಗಳು ಕ್ರಿ.ಶ. 1360 ರಿಂದ 1371ರ ಕಾಲಾವಧಿಯಲ್ಲಿ ಜರುಗಿದ ಘಟನೆಗಳನ್ನೊಳಗೊಂಡಿದೆ. ಇಲ್ಲಿ ಕಥೆಯು ಹರಿಹರನ ಸೋದರ ಬುಕ್ಕ ರಾಜನಿಂದ ಪ್ರಾರಂಭವಾಗುತ್ತದೆ.

ಬುಕ್ಕನು ವಿಜಯನಗರದಲ್ಲಿ ಆಳುತ್ತಿದ್ದನು. ಇವನು ಹಂಪೆಯ ವಿರೂಪಾಕ್ಷನ ಆರಾಧಕನಾಗಿ ಪ್ರಜಾವಾತ್ಸಲ್ಯ ಮಯಿಯಾಗಿದ್ದನೆಂದು ತಿಳಿದು ಬರುತ್ತದೆ. ಇವನ ಪತ್ನಿಯರಲ್ಲಿ "ದೇವಾಯಿ" ಯೇಪಟ್ಟಮಹಿಷಿ. ಬುಕ್ಕ ಹಾಗೂ ದೇವಾಯಿಯರ ಮಗನೇ ಕಂಪನರಾಯ, ಇವನು ತನ್ನ ಶೌರ್ಯ ಪರಾಕ್ರಮಗಳಿಂದ ಶತ್ರುಗಳನ್ನು ಹೆದರಿಸಿ ನಡುಗಿಸುತ್ತಿದ್ದುದರಿಂದ ಇವನಿಗೆ ಕಂಪನರಾಯ ಎಂಬ ಹೆಸರು ಅನ್ವರ್ಥ ವಾಗಿದ್ದಿತು. ತಂದೆಯಾದ ಬುಕ್ಕನು ಕಂಪನರಾಯನನ್ನು ಕರೆದು ಅವನಿಗೆ ಬುದ್ಧಿ ವಾದವನ್ನು ಹೇಳಿ, ತುಂಡೀರಮಂಡಲವನ್ನು ಆಳುತ್ತಿದ್ದ, ಚಂಪರಾಯನ ಮೇಲೆ ದಂಡೆತ್ತಿ ಹೋಗಿ ಸೋಲಿಸಿ, ನಂತರ ಮಧುರೆಯಲ್ಲಿರುವ ತುರುಷ್ಕರನ್ನು ಸದೆಬಡಿದು ಕಾಂಚೀಪುರವನ್ನು ರಾಜಧಾನಿಯನ್ನಾಗಿ ಮಾಡಿ ರಾಜ್ಯಭಾರವನ್ನು ಮಾಡಿಕೊಂಡು ಹೋಗಬೇಕೆಂದು ಆಜ್ಞೆಮಾಡುತ್ತಾನೆ. ಹಾಗೂ ಜಯಶಾಲಿಯಾಗೆಂದು ಆಶೀರ್ವದಿಸುತ್ತಾನೆ.

ನಂತರ ಕಂಪನರಾಯನು ತಂದೆಯ ಮಾತಿನಂತೆ ಸೈನ್ಯಸಮೇತನಾಗಿ ಕರ್ನಾಟಕ ರಾಜ್ಯದ ಎಲ್ಲೆಯನ್ನು 5, 6, ದಿವಸಗಳಲ್ಲಿ ದಾಟಿ, ತುಂಡೀರ ಮಂಡಲವನ್ನಾಳುತ್ತಿದ್ದ ಚಂಪನ ಮೇಲೆ ಬೀಳಲು 'ಕಂಟಕಾನನ' ಎಂಬ ಊರಿನಲ್ಲಿ ಪಾಳಯವನ್ನು ಹೂಡಿದ್ದು ನಂತರ ಪಾಲಾರಿನ ದಡದಲ್ಲಿರುವ ವಿರಂಚಿಪುರದ ಮಾರ್ಗವಾಗಿ ಚಂಪನ ರಾಜ್ಯವನ್ನು ಹೊಕ್ಕು ಚಂಪನನ್ನು ಕೊಂದು ಕಾಂಚಿಯನ್ನು ರಾಜಧಾನಿಯನ್ನಾಗಿ ಮಾಡಿ ಕೊಂಡು ವರ್ಣಾಶ್ರಮ ಧರ್ಮಗಳನ್ನು ಮೀರದೆ ತುಂಡೀರ ಮಂಡಲವನ್ನಾಳು ತ್ತಿದ್ದನೆಂದು ತಿಳಿದು ಬರುತ್ತದೆ. ಇದಲ್ಲದೆ ಇವನು ತನ್ನ ತಂದೆಯ ಆಜ್ಞೆಯಂತೆ ಮಧುರೆಯಲ್ಲಿದ್ದ ತುರುಷ್ಕರನ್ನು ಸೋಲಿಸಿದನೆಂಬ ವಿಷಯ ಕಾವ್ಯದಲ್ಲಿ ಸ್ಪಷ್ಟವಾಗಿದೆ.

ನಂತರ ಇವನು ಮಗಧ, ಮಾಳವ, ಸಿಂಹಳ, ಕೇರಳ, ಗೌಳ ಮುಂತಾದ ರಾಜ್ಯದ ರಾಜರುಗಳೊಡನೆ ಮೈತ್ರಿಯನ್ನು ಬೆಳೆಯಿಸಿದುದಲ್ಲದೆ ಆಸ್ಥಾನ ಪಂಡಿತರು ಮತ್ತು ಕವಿಗಳೊಡನೆ ಕಾಲಕಳೆಯುತ್ತಾ ಇರುವಾಗ ಒಂದು ದಿನ ಕಂಪನು ಗಂಗಾದೇವಿಯನ್ನು ಕುರಿತು ವಸಂತ ಮಾಸದ ವರ್ಣನೆಯನ್ನು ಮಾಡೆಂದು ಕೇಳುವನು ಎಂಬುದಾಗಿ ತಿಳಿದುಬರುತ್ತದೆ. ಆವಾಗ ಗಂಗಾದೇವಿಯು ಮಾಡಿದ ಸೂರ್‍ಯಾಸ್ತ ಹಾಗೂ ಚಂದ್ರೋದಯ, ವರ್ಣನೆಗಳು ಬಹಳ ಸೊಗಸಾಗಿವೆ.

ನಂತರ ಕಾವ್ಯದಲ್ಲಿ ಕಥೆ ಹೀಗೆ ಮುಂದುವರಿಯುತ್ತದೆ :–
ಒಂದಾನೊಂದುದಿನ ಅಪರಿಚಿತ ವ್ಯಕ್ತಿಯೋರ್ವಳು ಕಂಪನ ಎದುರಿನಲ್ಲಿನಿಂತು

1 ವೀರ ಕುವರ ಕಂಪನ" ಎಂದು ಪ್ರಾರಂಭವಾಗುತ್ತದೆ

2 ..............................

3 ..............................

4 ..............................

3 ಸಾಲಿನ, ನಂತರ 3 ಸಾಲಿನ ಶ್ಲೋಕಲುಪ್ತವಾಗಿದೆ ‹ 4 ನೇ ಸಾಲಿನಲ್ಲಿ.
ವ್ಯಾಘ್ರಪುರೀತಿಸಾಯತಾರ್ಥಂ" ಇಲ್ಲಿಗೆ ಶ್ಲೋಕಮುಗಿಯುತ್ತದೆ. ಮತ್ತೆ
2 ನೇ ಶ್ಲೋಕದಲ್ಲಿ ॥ ಆದಿರಂಗ ಮಪಾಸ್ತ ಯೋಗನಿದ್ರಾಂ ।
ಹೀಗೆ ಒಟ್ಟು 13 ಶ್ಲೋಕಗಳು ಬರುತ್ತವೆ. ಇದರ ತಾತ್ಪರ್ಯಹೀಗಿದೆ :–

ಒಂದಾ ನೊಂದುಕಾಲದಲ್ಲಿ ಸಮೃದ್ಧವಾಗಿದ್ದ ವ್ಯಾಘ್ರ ಪುರಿಯು ಇಂದು ಹಾಳಾಗಿದೆ. ಶ್ರೀ ರಂಗದೇವಾಲಯ ಮತ್ತು ಪರಶಿವನ ಗಜಾರಣ್ಯ ಶೂನ್ಯವಾಗಿದೆ. ಮಧುರೆಯು ನಾಶವಾಗಿ ತಾಮ್ರಪರ್ಣೀನದಿಯು ಪಾಪಿಗಳಿಂದ ವಧಿಸಲ್ಪಟ್ಟ ಗೋವುಗಳಿಂದ ಕೆಂಪಾಗಿ ಹರಿದಿದೆ, ಇದೋ ಈ ಖಡ್ಗವನ್ನು ತೆಗೆದುಕೊ, ಇದುವಿಶ್ವಕರ್ಮಕೃತವಾದುದು. ಇದು ದೈತ್ಯನಿಗ್ರಹಕ್ಕಾಗಿ ಮೊದಲು ಪರಮೇಶ್ವರನ ಹತ್ತಿರ ಇದ್ದಿತು. ನಂತರ ಪಾಂಡ್ಯರಾಜನ ತಪಸ್ಸಿಗೆ ಮೆಚ್ಚಿ ಶಿವನು ಅವನಿಗೆ ಕರುಣಿಸಿದನು, ಪಾಂಡ್ಯರಾಜನಿಂದ ಅಗಸ್ತ್ಯನಿಗೆ ದೊರೆತು ಅವನು ನಿನಗೆ ಕೊಡಲು ಹೇಳಿದ್ದಾನೆ, ನೀನು ಈ ಆಯುಧದಿಂದ ಶತ್ರುಗಳನ್ನು ಜಯಿಸಿ ರಾಮಸೇತುವಿನ ಮೇಲೆ ವಿಜಯ ಪತಾಕೆಯನ್ನು ಹಾರಿಸು. ಇಷ್ಟು, ಮೇಲಿನ ಶ್ಲೋಕಗಳ ಅಭಿಪ್ರಾಯವಾಗಿದೆ. ಇದರಿಂದ ಮುಂದಕ್ಕೆ ಶ್ಲೋಕಗಳು ಲುಪ್ತವಾಗಿವೆ.

ಒಟ್ಟನಲ್ಲಿ ಈ ಸ್ತ್ರೀಯಾರು? ಬಹುಶಃ ನಗರದ ಅಭಿಮಾನ ದೇವತೆಯಾಗಿರಬಹುದೆಂದೆನಿಸುತ್ತದೆ, ತುರುಷ್ಕರ ಪಾಪಕೃತ್ಯಕ್ಕೆ ನೊಂದು ಪಾಂಡ್ಯರಾಜರ ಕುಲ

ಪುರೋಹಿತನಾದ ಅಗಸ್ತ್ಯನ ಆಶ್ರಮಕ್ಕೆ ಹೋಗಿ ಅವನಿಂದ ಕೊಡಲ್ಪಟ್ಟ ಖಡ್ಗವನ್ನು ತೆಗೆನುಕೊಂಡು ಬಂದು ಮಧುರೆಯನ್ನು ತುರುಷ್ಕರಿಂದ ಬಿಡುಗಡೆಮಾಡಿಸಲು ಕೊಟ್ಟಿರಬಹುದೇನೋ ಎನಿಸುತ್ತದೆ. ಕೊನೆಗೆ ಕಂಪನಿಗೂ ದಕ್ಷಿಣದ ಸುಲ್ತಾನನಿಗೂ ನಡೆದ ಯುದ್ಧದ ವರ್ಣನೆ ಕಣ್ಣಿಗೆ ಕಟ್ಟಿದಂತೆ ವರ್ಣಿಸಲ್ಪಟ್ಟಿದೆ. ಯುದ್ಧಾಂತ್ಯದಲ್ಲಿ ಕಂಪನು ವಿಜಯಿಯಾಗಿ ಮಧುರೆಯಲ್ಲಿ ಸುಖವಾಗಿ ರಾಜ್ಯವಾಳುತ್ತಿದ್ದನೆಂದು ವರ್ಣಿತವಾಗಿದೆ.

ಮಹಾಕಾವ್ಯಗಳಲ್ಲಿ ಬರುವ ಔಚಿತ್ಯ ಪೂರ್ಣವಾದ ವರ್ಣನೆಗಳಿಂದ ಕೂಡಿ ಪುಷ್ಟವಾದ ಶೃಂಗಾರ, ವೀರರಸಗಳಿಂದ ಪರಿಪೋಷಿತವಾಗಿ, ಅಪಾರ ಲೌಕಿಕ ಅನುಭವ, ದೇಶಭಕ್ತಿ, ಇವುಗಳು ಕಾವ್ಯದಲ್ಲಿ ಮೂಡಿರುವುದರಿಂದ ಕವಯಿತ್ರಿಯೇ ಹೇಳುವಂತೆ ಈ ಗ್ರಂಥವು ಕವಿಗೆ ಕೀರ್ತಿಯನ್ನು ಸಹೃದಯರಿಗೆ ಸಂತೋಷವನ್ನು ಉಂಟುಮಾಡುವುದೆಂಬುದರಲ್ಲಿ ಸಂದೇಹವೇ ಇರಲಾರದು.

### ಗ್ರಂಥ ಋಣ


1 ಕ್ರೈತ್. ಇತಿಹಾಸ ಮತ್ತು ಸಂಸ್ಕೃತ ಕವಯಿತ್ರಿಯರು
2. ದಾಸ್‌ಗುಪ್ತ. ,, ,,
3. ಕೆ. ಟಿ. ಪಾಂಡುರಂಗೀ ,, ,,

## ವೈಜ್ಞಾನಿಕ ಕಿರು ಧಾರಾವಾಹಿ ಕನಸಿನ ಕನ್ನೆ 4.

ಪ. ರಾಮಕೃಷ್ಣಶಾಸ್ತ್ರಿ, ಶಿವಶಕ್ತಿನಿಲಯ, ಮಜ್ಜಿನ, ದಕ್ಷಿಣ ಕನ್ನಡ ಜಿಲ್ಲೆ.

ಹಳ್ಳಿ ಹಳ್ಳಿಯಲ್ಲೂ ಹೇಮ ರಾಣಿಯಾಗುತ್ತಾಳೆ ಎಂಬ ಸುದ್ದಿ ಗಾಳಿಗಿಂತಲೂ ವೇಗವಾಗಿ ಪ್ರಸಾರವಾಯಿತು ಹೇಮೆಯನ್ನು ಎಲ್ಲರೂ ನೋಡಬಯಸುವವರೇ ಅವಳನ್ನು ಭಕ್ತಿಯಿಂದ ನೋಡುವವರೇ "ರಾಣಿಯಾದ ಮೇಲೆ ನಮ್ಮನ್ನು ಮರೆಯಬೇಡ ತಾಯಿ "ಎನ್ನುವವರೇ.

ಅದನ್ನು ನೋಡಿ ಹೇಮ ಹಿಗ್ಗುವಳು. ಆಕೆಗೀಗಲೇ ರತ್ನಖಚಿತ ಸಿಂಹಾಸನದಲ್ಲಿ ಕುಳಿತಿದ್ದೇನೆ ಎಂಬ ಕನಸು. ಇವರೆಲ್ಲ ತನ್ನ ಪ್ರಜೆಗಳು ಎಂಬಷ್ಟು ಹಿಗ್ಗು. ಆಕೆ ನಗುತ್ತಾಳೆ. ಅವರ ಮಾತುಕೇಳಿ ನಾಚುತ್ತಾಳೆ. "ತಾನು ರಾಣಿ" ಎಂದು ಮನದೊಳಗೆ ಹೇಳುತ್ತಾಳೆ. ತನ್ನ ಅಂಗಾಂಗಳನ್ನು ನೋಡಿಕೊಳ್ಳುತ್ತಾಳೆ. ಆಗ ಆಕೆಗಾಗುವ ಸಂತಸ ಅಸ್ಪಷ್ಟವಲ್ಲ. ಅದೇ ಸಂತಸದಲ್ಲಿ ಬಾಯಲ್ಲಿ ಯಾವುದೋ ಧ್ವನಿ ರಾಗವಾಗಿ ಹೊರಹೊಮ್ಮಿ ಗಾಳಿಯೊಡನೆ ಲೀನವಾಗುತ್ತದೆ.

"ತಾನು ರಾಣಿ" ಅದು ಅವಳ ಕಿವಿಗೆ ಆಪ್ಯಾಯಮಾನವಾಗಿತ್ತು. ಅದರೊಂದಿಗೇ ಆಕೆಯ ಮನದಂತರಾಳದಲ್ಲಿ ಹುದುಗಿ ಸಸಿಯಾಗಲೊ ಬೇಡವೊ ಎಂದು ಅನುಮಾನಿಸುತ್ತ ಆಶಾಬೀಜವೊಂದು ತಳಮಳಿಸುತ್ತಿದ್ದುದು, ಸಸಿಯಾಗಬೇಕು ಸರಿಯಾದ ಕ್ಷೇತ್ರ ದೊರೆತ ಮೇಲೆ ಸಸಿಯಾಗಿ ಮರವಾಗಿ ಹೂ ಹಣ್ಣು ಬಿಡಬೇಕು ಎಂದು ಅದೀಗ ಮೊಳಕೆಯೊಡೆಯಿತು. ಅದೇ ಆಸೆಯನ್ನು ಹೇಮ ಈತನಕ ಬಿಗಿಹಿಡಿದಿದ್ದಳು. ಯಾರೊಬ್ಬರಿಗೂ ಅದನ್ನು ಆಕೆ ಹೇಳಿರಲಿಲ್ಲ. ಮನದೊಳಗಿದ್ದು ಹಾಗೇ ಇತ್ತು. ಅಂಥ ಆಶಾಪೂರ್ತಿಯಾದೀತೆಂಬ ಆಸೆ ಅಂದು ಆಕೆಗಿರಲಿಲ್ಲ. ಆಸೆ ಕೇವಲ ಆಸೆಯಾಗಿಯೆ ಉಳಿಯುವುದೆಂದು ಆಕೆಗೆ ತೋರಿತ್ತು. ಅಂದಿನ ಆ ಪರಿಸ್ಥಿತಿಯಲ್ಲಿ ಆದು ಸಹಜವೂ ಆಗಿತ್ತು.

ಆಕೆಯ ಆ ಪ್ರಬಲ ಇಚ್ಛೆಯೆಂದರೆ ಜಗತ್ತಿನಲ್ಲಿಯೇ ತೀರಾ ಕ್ರೂರವಾದ ಪುರುಷನೊಬ್ಬನನ್ನು ಆಕೆ ಸೃಷ್ಟಿಸಬೇಕಿತ್ತು. ನೋಡಲು ವೃತ್ರಾಸುರನಂತೆ ಭೀಕರನಾಗಿರಬೇಕು; ಭೀಮನಂತೆ ಕರುಳು ಬಗೆದು ರಕ್ತ ಕುಡಿಯುವ ದಾನವೀ ಶಕ್ತಿ ಬೇಕಿತ್ತು. ಮತ್ತಗಜದಂತೆ ಯಾರನ್ನು ಲೆಕ್ಕಿಸದೆ ಕುಟ್ಟಿ ಪುಡಿಮಾಡುವ ದಾಷ್ಟ್ಯ ಬೇಕಿತ್ತು. ಹುಂ ಎಂದೊಡನೆ ಬಿಟ್ಟ ಬಾಣದಂತೆ ನೆಗೆದು ಶತ್ರು ಸಮೂಹವನ್ನು ಹೊಕ್ಕು ಕೈಗೆ ಸಿಕ್ಕಿದವರನ್ನು ಬಡಿದು, ಕರುಳು ಹರಿದು, ರಕ್ತ ಕುಡಿದು ಕೇಕೆ ಹಾಕುವ ಪಿಶಾಚ ಮನಸ್ಸಿನವನಾಗಬೇಕಿತ್ತು. ಅಂಥ ಕ್ರೂರ ಮನುಷ್ಯನನ್ನು ಆಕೆ ಸಾಕಬೇಕಿತ್ತು. ಅವನು ಕೇವಲ ಆಯುಧವಾಗಿರಬೇಕೇ ಹೊರತು ಅವನಿಗೆ ಮನಸ್ಸು ಹೃದಯವೆಂಬಿತ್ಯಾದಿ ಎಂಬುದೇ ಇರಬಾರದು.

ಆ ಕನಸಿನ ಕ್ರೂರ ಮೂರ್ತಿಯನ್ನು ಆಕೆ ಚಿತ್ರಿಸಿಕೊಂಡು ಅದೆಷ್ಟೋ ಬಾರಿ ನೋಡಿದ್ದಳು. ಆ ಮೂರ್ತಿಯಿಂದ ಜರಗಿಸತಕ್ಕ ಅನೇಕ ಕಾರ್ಯಗಳನ್ನು ಕಲ್ಪಿಸಿ ಆ ಚಿತ್ರ ವನ್ನು ನೋಡಿ ಮನದ ತೃಪ್ತಿ ಆಸೆಯನ್ನು ತುಸು ಕಡಿಮೆ ಮಾಡಿಕೊಂಡಿದ್ದಳು. ಆದರೆ ಕನಸಿನ ಮೂರ್ತಿ ಮಾತ್ರ ಆಗಾಗ ಅವಳ ಮನದೆದುರು ಸುಳಿದು ಮನದ ನೆಮ್ಮದಿಯನ್ನು ಕಡಿದೊಗೆಯುತ್ತಿತ್ತು. ಅದಕ್ಕಾಗಿ ಆಕೆ ಕಾಡಿಗೆ ಹೋಗುವಳು. ಓಡುವ ಎರಳೆಗೆ ಈಟಿ ಎಸೆದು ಅದನ್ನು ಕೆಡುಹುವಳು. ಬಿದ್ದ ಎರಳೆಯನ್ನು ಈಟಯಲ್ಲಿ ಎತ್ತಿ ಚಕ್ರಾಕಾರವಾಗಿ ತಿರುಗಿಸಿ ದೂರ ಎಸೆಯುವಳು. ಭೀಕರ ಹುಲಿಯನ್ನು ಎದುರಿಸುವಳು. ಅದರೊಡನೆ ಯುದ್ಧ ಮಾಡುವಳು. ಅದು ಸತ್ತ ಮೇಲೂ ತನ್ನ ಮನಸ್ಸಿಗೆ ತೃಪ್ತಿ ಯಾಗುವಷ್ಟು ಹೊತ್ತು ಈಟಿಯಿಂದ ಚುಚ್ಚುವಳು. ಅದರ ಕರುಳು ಹೊರಬರುವ ತನಕ ಈ ಕಾಯಕ ನಡದೇ ನಡೆಯುತ್ತಿತ್ತು. ಆದರೂ ಹೇಮೆಯ ಮನದ ಮೇಲೆ ಯಾವುದೋ ಕೊರಗು ಕರಿಯ ತೆರೆಯನ್ನು ಎಳೆಯುತ್ತಲೇ ಇತ್ತು. ಆಕೆಗೆ ತೃಪ್ತಿಯಿರಲಿಲ್ಲ.

ಇಂಥ ಭೀಕರ ಆಸೆ ಹೇಮೆಯ ಚಿತ್ತ ಭಿತ್ತಿಯಲ್ಲಿ ಮೂಡಲು ಕಾರಣ ಅದು ಆಕೆ ಚಿಕ್ಕವಳಿರುವಾಗ ನಡೆದ ಘಟನೆಯೊಂದರಿಂದ. ದೇವಾಲಯದ ಕಟ್ಟೆಯಲ್ಲಿ ಅದೊಂದು ದಿನ ಪುರಾಣಿಕರೊಬ್ಬರು ಮಹಾಭಾರತವಾಚಿಸುತ್ತಿದ್ದರು. ಅದನ್ನು ಕೇಳಲು ಅನೇಕಾನೇಕ ಹಳ್ಳಿಗರು ಹೋಗುತ್ತಿದ್ದರು. ತಂದೆಯೊಂದಿಗೆ ಅವಳೂ ಪುರಾಣಶ್ರವಣಕ್ಕಾಗಿ ನಡೆದಳು. ಅಂದು ದುಶ್ಯಾಸನನ ವಧೆಯನ್ನು ಪುರಾಣಿಕರು ರುದ್ರರಸದಲ್ಲಿ ಹೇಳುತ್ತಿದ್ದರು. ಭೀಮಸೇನನಿಗೂ ದುಶ್ಯಾಸನನಿಗೂ ಘೋರಯುದ್ಧ ನಡೆದಿತ್ತು. ಭೀಮ ಒಂದೇ ಹಾರಿಕೆಗೆ ಹಾರಿ, ದುಶ್ಯಾಸನನ ಕಾಲಿಗೆ ಕಾಲು ಒತ್ತಿ ಭೂಗತ ಮಾಡಿದ್ದ. ಭೀಮಸೇನ ಅಟ್ಟಹಾಸಗೈದು ತನ್ನ ಉಗುರುಗಳಿಂದಲೇ ಪರಚಿ, ಹಲ್ಲುಗಳಿಂದಲೇ ಕಚ್ಚಿ, ದುಶ್ಯಾಸನನ ಹೊಟ್ಟೆಯನ್ನು ಬಗೆದಿದ್ದ. ಆ ರಕ್ತದ ಓಕುಳಿಯಲ್ಲಿ ಹೊರಳಾಡಿದ್ದ. ಹೊಟ್ಟೆಯಿಂದ ಕರುಳನ್ನು ತೆಗೆದು ದ್ರೌಪದಿಯನ್ನು ಅಟ್ಟಹಾಸದಿಂದ ಕರೆದಿದ್ದ. ರಕ್ತ ದೋಕುಳಿಯಾಡಿದ ಭೀಮನ ಮುಖ ರೌದ್ರಭೀಕರ ವಾಗಿ ಎಲ್ಲರ ಎದೆಯನ್ನೂ ನಡುಗಿಸುವಂತೆ ಮಾಡಿದ್ದ.

ದ್ರೌಪದಿ ಬಂದಿದ್ದಳು. ಆ ರಕ್ತವನ್ನೇ ಎಣ್ಣೆಯಾಗಿ ತಲೆಗೆ ಹಾಕಿಕೊಂಡಿದ್ದಳು. ಕರುಳನ್ನು ಮಾಲೆಯಾಗಿ ಮುಡಿದಿದ್ದಳು. ರಕ್ತವನ್ನು ಹೀರಿ ಹೀರಿ ಕುಡಿದು ತೃಪ್ತಿಯಿಂದ ನಕ್ಕಿದ್ದಳು.

ಎಲ್ಲರೂ ಸ್ಥಂಭೀಭೂತರಾಗಿ ಪುರಾಣ ಶ್ರವಣ ಮಾಡುತ್ತಿದ್ದಾಗ ಆ ಭೀಕರ ದೃಶ್ಯ ಕೇಳಿಯೂ ಸಂತಸ ಗೊಂಡವಳು ಹೇಮೆ. ಅಂದೇ ಆಕೆಯ ಹೃದಯದಲ್ಲಿ ಭೀಮ ನಂಥ ಮನಸ್ಸಿನ ಪ್ರತಿಷ್ಠಾಪನೆ ಮೂಡಿತ್ತು; ದ್ರೌಪದಿಯಂಥ ಹೆಣ್ಣೊಬ್ಬಳನ್ನು ಸೃಷ್ಟಿ

ಸಲು ಯೋಚಿಸಿತ್ತು. ಭೀಮನಂಥ ಪುರುಷ ದ್ರೌಪದಿಯಂಥ ಸ್ತ್ರೀ! ಇವರಿಬ್ಬರಲ್ಲಿ ಒಬ್ಬರನ್ನು ತಾನು ಸೃಷ್ಟಿಸಿ, ರೊಚ್ಚಿಗೆಬ್ಬಿಸಿ, ಜನಜಾತ್ರೆಯಲ್ಲಿ ಬಿಟ್ಟು ಅಲ್ಲಿ ನಡೆಯುವ ಮಾರಿಯೌತಣವನ್ನು ರಕ್ತದೋಕುಳಿಯಾಟವನ್ನು ಕಾಣಬೇಕು, ಹಿಗ್ಗಿ ಹಾರಾಡಬೇಕು.

ಕಟ್ಟಿಕೊಂಡ ಆಶಾಬೀಜವಿಂದು ಮೊಳಕೆಯೊಡೆಯಲು ಸನ್ನಿಹಿತವಾಗಿದೆ. ಮನುಷ್ಯನ ಆಶೆಯೊಂದೂ ಮುರುಟಿ ಸಾಯಲಾರದು; ಒಂದಲ್ಲ ಒಂದು ದಿನ, ಕಾಲ ಬಂದಾಗ ಅದು ತನ್ನ ಫಲವನ್ನು ಕೊಟ್ಟೇಕೊಡುವುದು. ಅದನ್ನು ಕಾಯುವ ತಾಳ್ಮೆ ಬೇಕು, ತಾಳ್ಮೆ !

ಹೀಗೆ ಯೋಚಿಸುತ್ತ ದಿನ ಕಳೆದಾಗ ಅರಮನೆಯಿಂದ ಸೈನಿಕರು, ಪಲ್ಲಕಿ, ಕುದುರೆಗಳು, ಆನೆಗಳು ಬಂದು ಶರಣಪ್ಪನ ಗುಡಿಸಲ ಮುಂದೆ ನಿಂತುವು. ಅದನ್ನು ಕಂಡು ಹಿಗ್ಗಿನಿಂದ ಕುಣಿದೇ ಬಿಟ್ಟ ಶರಣಪ್ಪ.

ಹೇಮೆ ಅದನ್ನೆಲ್ಲ ನೋಡಿ ಒಮ್ಮೆ ನಿಟ್ಟುಸಿರು ಬಿಟ್ಟಳು. ಆಕೆ ಇನ್ನು ಸ್ವಚ್ಛಂದ-ವಾಗಿ ಕಾಡಿಗೆ ಹೋಗಲಾರಳು ; ಬೇಟೆಯಾಡಲಾರಳು ; ಯಾವುದನ್ನು ಮಾಡಲಾ-ರಳು. ಎಲ್ಲದಕ್ಕೂ ದಾಸದಾಸಿಯರಿದ್ದಾರೆ. ಹಾಗೇ ಕುಳಿತಾಗ ಜಡವಾದರೆ ಪುಷ್ಪ-ವಾಟಿಕೆಯೊಳಗೆ ಒಂದು ಸುತ್ತು ಬರಬಹುದು. ಮುಂದೆ ? ಹುಟ್ಟಿದೂರನ್ನು ಬಿಟ್ಟು ತೆರಳಲು ಅವಳ ಮನಸ್ಸೇಕೊ ಒಮ್ಮೆ ವ್ಯಥೆಪಟ್ಟಿತು ತಾನು ಚಿಕ್ಕದಿರುವಾಗ ಆಡಿದ ಬಯಲು, ಓಡಿದ ಜಾಗ ಈಸಿದ ಹೊಳೆ, ಬೇಟೆಯಾಡಿದ ಕಾಡು-ಎಲ್ಲವನ್ನೂ ತೊರೆದು ಆಕೆಯಿಂದು ಹೊರಟು ಹೋಗಬೇಕು; ಹೋಗಲೇ ಬೇಕು.

ಹೋಗದಿರಬಹುದಿತ್ತು ; ಈ ಹಳ್ಳಿಯಲ್ಲೆ ಆಡುತ್ತಿರಬಹುದಿತ್ತು. ಆದರೆ-ಹೇಮೆಯ ಮನದೊಳಗಿನ ಕನಸು ನನಸಾಗುತ್ತಿದ್ದರೆ : ಆಗಲು ಅವಕಾಶವಿರುವಾಗ ಅದನ್ನು ಬಿಟ್ಟು, ಈ ಮೂಲೆಯಲ್ಲಿ ಮಾಡುವುದಾದರೂ ಏನನ್ನು. ಆ ಆಸೆ ಫಲಿಸಲು ಬೇಕಾದರೆ ಅವಳಿಂದ ತನ್ನ ಸ್ವಂತಿಕೆಯನ್ನು ಮರೆಯಲು ಸಿದ್ಧವಾಗಿದ್ದಾಳೆ. ಅಷ್ಟು ರಕ್ತಗತವಾಗಿತ್ತು ಆ ಆಶಾಪಾಶ.

ಶುಭ ಮುಹೂರ್ತವೊಂದರಲ್ಲಿ ಹೇಮೆ ಅರಮನೆ ಪಲ್ಲಕಿ ಏರಿದಾಗ ಮಂಗಳ ವಾದ್ಯಗಳು ಮೊಳಗಿದ್ದವು. ಹೇಮೆಯ ಜೀವನದಲ್ಲಿ ಇನ್ನು ಮುಂದೆ ಮಂಗಳವೆ ಸಂಭವಿಸಲಿದೆಯೆಂದು ಸಾರಿದುವೇನೋ !

# ಗ್ರಾಮಾಂತರ ಬಸವಜಯಂತಿ 237 ರಿಂದ 243

— ಹೆಚ್. ವಿ. ವೀರಭದ್ರಯ್ಯ.

ಆತ್ಮೀಯ ಶರಣ ಬಂಧು,

ಸತ್ಸಂಕಲ್ಪದಿಂದ ಲೋಕ ಹಿತಾರ್ಥಕ್ಕಾಗಿ ಆರಂಬಿಸುವ ಕೆಲಸಗಳೆಲ್ಲ ಹಂತ ಹಂತವಾಗಿ ಅಭಿವೃದ್ಧಿಗೊಳ್ಳುತ್ತವೆಂಬುದಕ್ಕೆ ಶ್ರೀ ಸಿದ್ದಗಂಗೆಯ 'ಅಪ್ಪ, ಗಳು ಕೈಗೊಂಡ ಗ್ರಾಮಾಂತರ "ಬಸವ ಜಯಂತಿಯೆ" ಪ್ರತ್ಯಕ್ಷ ನಿದರ್ಶನವಾಗಿದೆ. ಹದನೋಡಿ ಹರಗು ಬೇದೆ ನೋಡಿ ಬಿತ್ತು ಎಂಬಂತೆ ಗ್ರಾಮೀಣ ಬಂಧುಗಳ ಮುಗ್ಧ ಹೃದಯಂಗಳಿಗೆ ಬಸವತತ್ವಗಳನ್ನು ಬಿತ್ತುತ್ತ ನಡೆದಿರುವ ಪರಮ ಪೂಜ್ಯರ 'ಮಹಾ ಮಣಿಹ' ಎಂದು ಬಸವ ಮಹಾಪೂಕರವಾಗಿ ಹರಿದಿದೆ. ಜನ ಜಾಗೃತಿ ಅರಳುತ್ತಿದೆ.

ದಿನಾಂಕ 4-4-90 ರಂದು ಶ್ರೀ ಕ್ಷೇತ್ರ ಎಡೆಯೂರಿನಲ್ಲಿ ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶಿತವಾದಾಗ ಕಿಕ್ಕಿರಿದ ಜನಸ್ತೋಮ ಬೆರಗಾಗಿಹೋಯಿತು. ದಿನಾಂಕ 8-4-90 ರಂದು ಮಾಗಡಿ ತಾಲ್ಲೂಕು ಮೋಟಗಾನಹಳ್ಳಿ ಬಸವ ಜಯಂತಿ ಆಚರಣೆಯಲ್ಲಿ ತಲ್ಲೀನವಾಯಿತು.

ಇಂದು ಹೃದಯ ಹೃದಯಗಳಿಗೆ ಪ್ರೇಮದ ರಸ್ತೆಯನ್ನು ನಿರ್ಮಿಸುವ ಪವಿತ್ರ ಯಾತ್ರೆಯನ್ನು ಕೈಗೊಂಡಿರುವ ಸಿದ್ಧಗಂಗಾ ಸ್ವಾಮಿಗಳು ಮುಕ್ತಿಯ ವ್ಯಾಪಕಾರ್ಥವನ್ನು ಬಿತ್ತಿದ ಬಸವಸಂದೇಶವನ್ನು ನಿಷ್ಠೆಯಿಂದ ಪ್ರಚಾರ ಮಾಡುತ್ತಿರುವ ಮಠಾ-ಧಿಪತಿಗಳಾಗಿದ್ದಾರೆ ಎಂದು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪ್ರೊ|| ಜಿ.-ಎಸ್. ಸಿದ್ಧಲಿಂಗಯ್ಯನವರು ನುಡಿದರು

ಸಮಾರಂಭದಲ್ಲಿ ಶ್ರೀ ಮಹದೇವ ಶಾಸ್ತ್ರಿಗಳು, ಶ್ರೀ ಶಂಕರಲಿಂಗಪ್ಪನವರು ಶ್ರೀ ಅಂಜನ ಮೂರ್ತಿಯವರು, ಶ್ರೀ ಬಿ, ಎಸ್. ಪರಮಶಿವಯ್ಯನವರು, ಶ್ರೀ-ಸೋಮಣ್ಣ, ಶ್ರೀ ಶಂಕರ್‌ನಾಯಕ್, ಶ್ರೀ ಚನ್ನೆಗೌಡರು, ಶ್ರೀಮತಿ ಕಮಲಮ್ಮ, ಶ್ರೀಮತಿ ಕೆಂಪಮ್ಮನವರು ಮಾತನಾಡಿದರು.

ಬಸವಣ್ಣನವರು ಸ್ವತಂತ್ರ ವಿಚಾರವಾದಿ, ಆತ್ಮ ವಿಶ್ವಾಸಿ, ಹೋರಾಟಗಾರ, ವಿವೇಕ ವಿನಯಗಳ ಸಮನ್ವಯ ಶೀಲ ನೈತಿಕ ಸೋಪಾನದ ಮೇಲೆ ದೈವಿಕ ಸಂಪತ್ತಿನ ಧರ್ಮಸೌಧ ನಿರ್ಮಿಸಿದ ಪರಿಶುದ್ಧ, ಸೃಷ್ಠಿ ಜಗತ್ತು ಕಂಡ ಪರಮಾದ್ಭುತ ವಿಸ್ಮಯ ಎಂದು ಆಶೀರ್ವಚನ ಮಾಡಿದರು ಪರಮಪೂಜ್ಯ ಶ್ರೀ ಶ್ರೀಗಳ ಅಧ್ಯಕ್ಷ ಪೀಠದಿಂದ.

ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶನಕ್ಕೆ ಗ್ರಾಮೀಣ ಜನತೆಯ ಪ್ರೋತ್ಸಾಹ ಕಂಡು ಆಶ್ಚರ್ಯವಾಯಿತು.

ದಿನಾಂಕ. 10-4-90 ರಂದು ರಾಮನಗರ ತಾಲ್ಲೂಕು ದೊಡ್ಡಗಂಗವಾಡಿ. ಯಲ್ಲಿ ಬಸವಜಯಂತಿ ಹಬ್ಬದ ಸಂಭ್ರಮ, ತಳಿರು ತೋರಣಗಳ ಅಲಂಕಾರ, ಕುಂಭ ಮಂಗಳ ದೃಷ್ಯ, ಆರತಿಯ ಸಾಲು ಸಾಲು, ಮಂಗವಾದ್ಯಗಳ ನಾದ ಸಂಭ್ರಮ ಅದೊಂದು ಶರಣ ಸಮೂಹದ ಸುಂದರ ಸಂದರ್ಭ.

ಎರಡನೆ ಭಾರಿ ಬಸವ ಜಯಂತಿಯನ್ನು ಆಚರಿಸುತ್ತಿರುವ ದೊಡ್ಡಗಂಗವಾಡಿ ಜನತೆಯ ಮನಸ್ಸು ದೊಡ್ಡದು, ಜೀವನ ಪವಿತ್ರವಾಗಬೇಕಾದರೆ ಮಹಾತ್ಮರನ್ನು ನೆನೆದು ಅನುಸರಿಸಬೇಕು. ಕಿಂಕರನಾದರೆ ವ್ಯಕ್ತಿ ಶಂಕರನಾಗಬಹುದು. ಆತ್ಮದ ಬೆಳಕಿನಲ್ಲಿ ಜೀವನ ಮುಂದೆ ಸಾಗಬೇಕು ಎಂದು ನುಡಿದರು ಬೆಟ್ಟಹಳ್ಳಿ ಮಠದ ಪೂಜ್ಯ ಶ್ರೀ ಶ್ರೀ ನೀಲಕಂಠ ಶಿವಾಚಾರ್ಯ ಸ್ವಾಮಿಗಳು.

ಕ್ರಿಯಾಶೀಲ ಜನಾಂಗ ನಿರ್ಮಾಣಕ್ಕಾಗಿ ಪರಮ ಪೂಜ್ಯ ಶ್ರೀ ಶ್ರೀ ಗಳು ಬಸವ ಜಯಂತಿಯನ್ನು ಆಚರಿಸಿ ತೋರಿಸುತ್ತ ಸಾಗಿದ್ದಾರೆ ಎಂದು ಬೇವೂರು ಪೂಜ್ಯ ಶ್ರೀ ಶ್ರೀ ಗಳಾದ ಶಾಂತಮಲ್ಲಿಕಾರ್ಜುನ ಸ್ವಾಮಿಗಳು ನುಡಿದರು.

ಕನಕಪುರ ದೇಗುಲ ಮಠದ ಪೂಜ್ಯ ಶ್ರೀ ಶ್ರೀ ಗಳಾದ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಆಶೀರ್ವಚನ ಮಾಡಿದರು.

ಗ್ರಾಮದ ಹಿರಿಯರಾದ ಶ್ರೀ ಡಿ. ವಿ. ದೊಡ್ಡವೀರಯ್ಯನವರು ಮಾತನಾಡುತ್ತ ಮೈಸೂರು ಪಂಚಗವಿ ಮಠದ ಪೂಜ್ಯ ಗೌರೀಶಂಕರಸ್ವಾಮಿಗಳನ್ನು ಸ್ಮರಿಸಿಕೊಳ್ಳುತ್ತ "ಆ ಮಾಣಿಕ್ಯ ಹೋಯಿತು, ರತ್ನ ಉಳಿದಿದೆ" ಎಂದು ಸಿದ್ಧಗಂಗಾ ಸ್ವಾಮಿಗಳವರನ್ನು ಕುರಿತು ಭಕ್ತಿನುಡಿ ಸೇವೆಗೈದರು.

ಜನಪದರು ಬಸವಣ್ಣನನ್ನು ಆತ್ಮೀಯ ಅಣ್ಣನೆಂದೇ ಕರೆದು ಗೌರವಿಸಿದುದನ್ನು ಹೆಚ್. ವಿ. ವೀರಭದ್ರಯ್ಯನವರು ವಿವರಿಸಿದರು.

ರಾಷ್ಟ್ರವನ್ನು ಇಂದು ಸಾಲಮೇಳಗಳಿಂದ ಕಟ್ಟಲು ಹೊರಟಿರುವ ದೇಶದಮುಖಂಡರು ಬಸವ ಸಂದೇಶವನ್ನು ಅರ್ಥಮಾಡಿಕೊಳ್ಳಬೇಕಾಗಿದೆ, ವೃತ್ತಿ ನೈಪುಣ್ಯತೆಯ ಜೊತೆಗೆ ನೈತಿಕ ಸಂಪತನ್ನು ಬೆಳೆಸಿಕೊಳ್ಳುವ ಶ್ರೇಷ್ಠ ಮಾರ್ಗವನ್ನು ತೋರಿಸಿಕೊಟ್ಟ ಬಸವಣ್ಣನವರು ಅಹಂಕಾರವನ್ನು ಬಿಟ್ಟು ಮಾಡಿದ್ದೆಲ್ಲ ಶ್ರೇಷ್ಠವಾಗುತ್ತದೆ ಎಂದು ತೋರಿಸಿಕೊಟ್ಟಿದ್ದಾರೆ. ಎಂದು ಆಶೀರ್ವಚನ ನೀಡಿದರು ಪರಮ ಪೂಜ್ಯರು.

ನಾಟಕ ನಡೆಯುತ್ತಿರುವಾಗ ಮಳೆರಾಯ ನಾಟಕ ನೋಡಬೇಕೆಂಬಾಶೆಯಿಂದ ಬಂದ ಆದರೆ ಅದಾವ ತುರ್ತು ಕೆಲಸವಿತ್ತೋ ಬೇಗ ಹಿಂತಿರುಗಿದ. ನಾಟಕ ಮುಂದುವರಿಸಿ ಎಂದರು ಪೂಜ್ಯರು. ನಾಟಕದ ದಿಗ್ದರ್ಶಕರಾದ ವಿದ್ವಾನ್ ವೆಂಕಟ-ರಾಮು ಭಾಗವತರು ತೊಯ್ದು ಹೋಗಿದ್ದರು ಪರಮ ಪೂಜ್ಯರು ತಾವು ಹೊದ್ದಿದ್ದ ಶಾಲನ್ನೇ ನೀಡಿ ನಾಟಕ ಮುಂದುವರಿಸಲು ಆಶೀರ್ವದಿಸಿದರು. ಜನ ಕದಲದೆ ಇದ್ದು ನಾಟಕ ನೋಡಿದರು. ಮಳೆಬಂದರು ಬಸವಣ್ಣ ಎನ್ನುತ್ತಿದ್ದರು. "ಬಸವ ನಾಡೊಳಗೆ ಮಳೆಬೆಳೆಯು" ಎಂಬ ಗರತಿಯ ಹಾಡು ನೆನಪಾಯಿತು. ಊರಿನವರು ಹೇಳಿದ್ದು ಕಳೆದಸಲ ಬಸವ ಜಯಂತಿ ಆಚರಿಸಿ ಮಳೆ ಬೆಳೆ ಕಂಡೆವು. ಕೆರೆಗೆನೀರು ಬಂದಿತು. ಆ ಸಂತೋಷದಿಂದಲೇ ಈ ಸಲವೂ ಬಸವ ಜಯಂತಿ ಆಚರಿಸುತ್ತಿದ್ದೇವೆ. ಇಷ್ಟಕ್ಕೂ ನಿಲ್ಲಿಸುವುದಿಲ್ಲ ಮುಂದಿನ ವರ್ಷವೂ ಜಯಂತಿ ಆಚರಿಸುತ್ತೇವೆ ಎಂದರು. (ಅನಂತರ ಕೇಳಿಬಂದ ಮಾತು, ನಾಟಕವಾಡಿಬಂದ ಮೇಲೆ ಮಳೆಬಂದು ಕೆರೆಗೆ ನೀರು ಬಂದಿದೆ ಎಂಬ ಸಂತೋಷದ ಸುದ್ದಿ)

ದಿನಾಂಕ 15-4-90 ರಂದು ಕುಣಿಗಲ್ ತಾ|| ಶ್ರೀ ಕ್ಷೇತ್ರ ಬೆಟ್ಟಳ್ಳಿಮಠದಲ್ಲಿ ಬಸವಜಯಂತಿ ಆಚರಣೆಗೆ ಸಮಾವೇಶ ಗೊಂಡಿದ್ದ ಬೃಹತ್ ಜನಕೋಟಿ ಕಂಡ ಶ್ರೀ ಮಠದ ಪೂಜ್ಯ ಶ್ರೀ ಶ್ರೀ ನೀಲಕಂಠ ಶಿವಾಚಾರ್ಯ ಸ್ವಾಮಿಗಳವರೇ ಹಿಂದೆಂದೂ ಇಷ್ಟೊಂದು ಜನಸಾಗರವನ್ನು ಕಂಡಿರಲಿಲ್ಲ ಎಂದರಲ್ಲದೆ, ಅತ್ಯಂತ ವೈಭವ ಪೂರ್ಣ ವಾಗಿ ವ್ಯವಸ್ಥೆ ಗೊಳಿಸಿ ಭಕ್ತಾದಿಗಳ ಮನಸ್ಸಿಗೆ ಸಂತೋಷ, ಸಂತೃಪ್ತಿಯನ್ನು ತಂದುಕೊಟ್ಟರು. ಸಮಾರಂಭದಲ್ಲಿ ರಾಜ್ಯದ ಅರ್ಥಸಚಿವರಾದ ಶ್ರೀ ರಾಜಶೇಖರ-ಮೂರ್ತಿಯವರು, ಶಾಸಕರಾದ ಶ್ರೀ ಕೆ. ಲಕ್ಕಪ್ಪನವರು, ಲೋಕಸಭಾ ಸದಸ್ಯರು, ವಿಧಾನ ಪರಿಷತ್ತಿನ ಉಪಸಭಾ ಪತಿಗಳು, ಮುಖಂಡರು ಭಾಗವಹಿಸಿ ಸಮಾ-ರಂಭದ ಯಶಸ್ಸಿಗೆ ಕಾರಣರಾದರು.

ಪರಮ ಪೂಜ್ಯರು ಆಶೀರ್ವಚನ ನೀಡುತ್ತ ಬಸವಣ್ಣ ಆಧುನಿಕ ಭಾರತದ ಸಮಸ್ಯೆಗಳಗೆಲ್ಲ ಪರಿಹಾರನೀಡುವ ಪರಮೇಶ್ವರನಾಗಿದ್ದಾರೆ. ಅಲ್ಲದೆಮುಕ್ತ ಚಿಂತಕ, ಕ್ರಾಂತದರ್ಶಿ, ಕ್ರಾಂತಿಯೋಗಿ, ಶ್ರಮ ಜೀವಿಗಳ ಆರಾಧ್ಯ ಮೂರ್ತಿ, ನಿರಹಂಕಾರಿಗಳ ಚೂಡಾರತ್ನ, ಮೃದುಮಾತಿನ ಮಹಂತ, ಸದುವಿನಯದ ಸದಾಶಿವ, ಕಾಯಕದ ಕಾರುಣ್ಯವಂತ, ದಾಸೋಹದ ದಾರ್ಶನಿಕ ಯುವಜನಾಂಗ ಬಸವಣ್ಣನವರನ್ನು ಅನುಸರಿಸಿದ್ದೇ ಆದರೆ ಜಗತ್ ಕಲ್ಯಾಣವಾದೀತು. ಎಂದರು.

ನಾಟಕ ನೋಡಲು ಬಂದ ಪ್ರೇಕ್ಷಕರು ಎತ್ತೆತ್ತ ನೋಡಿದರೂ ಜನರೇ. ಜೊತೆಗೆ ಸಾಲದೆಂಬಂತೆ ಮಳೆರಾಯನ ಆಗಮನ. ಏನೇ ಆಗಲಿ ಇಂದು ನಾಟಕ ನೋಡಿಯೇ ಹೋಗುತ್ತೇನೆ ಎಂಬ ಛಲ. ನಾಟಕ ಪ್ರಾರಂಭವಾಯಿತು. ಮಳೆರಾಯ ಬಂದು

ಬಂದು ಹೋಗತೊಡಗಿದ ಜನ ಅವನನ್ನು ಲೆಕ್ಕಿಸದೇ ಕುಳಿತರು. ಕೊನೆಗೆ ನಾಟಕ ಕಲಾವಿದರೆ ಸೋಲಬೇಕಾಯಿತು. ಬಸವಣ್ಣನವರ ಮದುವೆ ದೃಶ್ಯದವರೆಗೂ ಮಳೆ-ರಾಯನೊಂದಿಗೇ ಹೆಜ್ಜೆ ಹಾಕಿದರೂ ಮುಂದೆ ಸಾಗದೆ ಹಿಂಜರಿದೆವು. ಮಳೆರಾಯ ಗೆದ್ದ, ಬಸವಣ ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ, ಎಂಬಂತೆ ಮಳೆರಾಯನ ಮುಂದೆ ಕಿರಿಯರಾಗಿ ನಡೆದುಕೊಂಡ ಕಲಾವಿದರು, ಶ್ರೀ ಶ್ರೀ ಗಳವರ ಆದೇಶದ ಮೇರೆಗೆ ನಾಟಕವನ್ನು ಮುಂದುವರಿಸದೆ ಗತ್ಯಂತರ ವಿಲ್ಲವಾಯಿತು. ಕಲಾಭಿಮಾನಿಗಳ ಅದಮ್ಯ ಉತ್ಸಾಹ ಮಳೆಯ ಮಧ್ಯದಲ್ಲಿ ಬಿಸಿಯಾಗಿಯೇ ಇತ್ತು. (ಅನಂತರ ಬಂದ ಬೇಡಿಕೆ–ಮತ್ತೆ ನಾಟಕ ಆಡಲೇಬೇಕು ಬೆಟ್ಟಳ್ಳಿಮಠದಲ್ಲಿ ಎಂದು. ಅದಕ್ಕಾಗಿ ಪರಮಪೂಜ್ಯರ ಅನುಗ್ರಹ 25-5-90ರಂದು ಪುನಃ ಪ್ರದರ್ಶನ ಶ್ರೀ ಮಠದ ಉರಿಲಿಂಗೇಶ್ವರ ಪೀಠದಲ್ಲಿ)

ದಿನಾಂಕ 19-4-90 ರಂದು ಹಾಸನ ಜಿಲ್ಲೆ ಸಕಲೇಶಪುರದಲ್ಲಿ ಬಸವ ಜಯಂತಿ ಮಲೆನಾಡಿನ ಕೇಂದ್ರಸ್ಥಳ. ಕಾಫಿ, ಏಲಕ್ಕಿಗಳ ಬೀಡು, ಸಿದ್ಧಗಂಗಾ ಆರಾಧಕರ ನೆಲೆವೀಡು, ಶ್ರೀಮಂತಿಕೆಯ ಜೊತೆಗೆ ಭಕ್ತಿ ಶ್ರೀಮಂತಿಕೆಯೂ ಸಂಗಮಿಸಿ ಘಮ ಘಮಿಸಿತು. ಬಸವಣ್ಣ ಬರೆದ ರಾಜ್ಯಾಂಗದ ತಿದ್ದುಪಡಿ ಮಾಡಲಾಗದಂತಹ ಪವಿತ್ರ -ವಾದ ಅಮೂಲ್ಯ ವಚನ ಸಾಹಿತ್ಯ ಅದನ್ನು ಕಾಪಾಡಿಕೊಳ್ಳಬೇಕು. ಅಂದರೆ ಅಧ್ಯಯನ ಮಾಡುತ್ತ ಬರಬೇಕು ಅದೇ ನಾವು ಬಸವಣ್ಣನವರಿಗೆ ಸಲ್ಲಿಸ ಬಹುದಾದ ಕಾಣಿಕೆ ಎಂದರು ಶಾಸಕರಾದ ಶ್ರೀ ಬಿ. ಬಿ. ಶಿವಪ್ಪನವರು.

ಶಾಸಕರಾದ ಶ್ರೀ ಗುರುದೇವ್‌ರವರು ಮಾತನಾಡುತ್ತ ಸಿದ್ಧಗಂಗಾಸ್ವಾಮಿಗಳು ಮಾಡುತ್ತಿರುವ ಬಸವತತ್ವ ಪ್ರಚಾರದಿಂದ ಜನಜಾಗೃತಿ ನಡೆದಿದೆ, ಯುವ ಜನಾಂಗ ಸನ್ಮಾರ್ಗಕ್ಕೆ ಬರುವಂತೆ ಪ್ರೇರಿಸಿದೆ ಎಂದು ನುಡಿದರು.

ಮಹಿಳೆಯರ ಉದ್ಧಾರಕ್ಕೆ ಬಸವಣ್ಣನವರು ಮಾಡಿದ ಸುಧಾರಣೆಗಳ ಸಾದ್ಯಂತ ವಿವರಣೆಗಳನ್ನು ನೀಡಿದರು ಶ್ರೀಮತಿ ಬಿ. ಗಂಗಾಂಬಿಕೆಯವರು.

ಶ್ರೀ ಕೆ. ಆರ್. ಲಿಂಗಪ್ಪನವರು ಬಸವಣ್ಣನವರಂತ ವ್ಯಕ್ತಿ ಹುಟ್ಟಲಿಲ್ಲ; ಜನಪ ಸಾಹಿತ್ಯದಂಥ ಸಾಹಿತ್ಯ ಬರಲಿಲ್ಲ ಎಂದು ನುಡಿದರು.

ಜನಪದ ಸಾಹಿತ್ಯದಲ್ಲಿ ಶಿವಾನುಭವ ಅರಳಿರುವ ಸುಂದರ ಸನ್ನಿವೇಶಗಳನ್ನು ತ್ರಿಪದಿಗಳ ಮೂಲಕ ಹಾಡಿತೋರಿಸಿದರು ಶ್ರೀ ಹೆಚ್. ವಿ ವೀರಭದ್ರಯ್ಯನವರು.

ಇಂದು ಜನಶಕ್ತಿಯ ಅಪವ್ಯಯವಾಗುತ್ತಿದೆ Loss of Man Power ಹಿಂದೆಂದೂ ಕಾಣದಷ್ಟು ಇಂದು ತಾಂಡವ ವಾಡುತ್ತಿದೆ. ಇಂಥದರ ವಿರುದ್ಧ ಸಿಡಿ

ದ್ದವರು ಬಸವಣ್ಣನವರು ಕಾಯಕಕ್ಕೆ ಅವರು ಕೊಟ್ಟ ಮಹತ್ವ ಜಗತ್ತಿನ ಮತ್ತಾವ ಸುಧಾರಕರೂ ಕೊಡಲಿಲ್ಲ. ಕ್ರಿಯಾ ಮುಖಿ ಜನಾಂಗಕ್ಕೆ ಮಣೆಹಾಕಿ ಹಣೆಮಣಿದವರು ಬಸವಣ್ಣನವರು. ಅಲ್ಲಿ ವರ್ಗ, ವರ್ಣ, ಲಿಂಗ, ಮನಸ್ಸು ಭೇದವಿರಲಿಲ್ಲ. ಮಹಾಮನೆ ಅನುಭವಮಂಟಪ ಎಂಬ ಅನುಪಮವಾದ ವ್ಯವಸ್ಥೆ ಬಸವಣ್ಣನವರು ಮಾಡಿದ ವ್ಯವಸ್ಥೆ ಎಂದು ಆಶೀರ್ವಚನ ನೀಡಿದರು. ಪರಮ ಪೂಜ್ಯ ಶ್ರೀ ಶ್ರೀಗಳು. ನಾಟಕ ಪ್ರದರ್ಶನಕ್ಕೆ ಹತ್ತುಸಾವಿರ ಪ್ರೇಕ್ಷಕರು.

ದಿನಾಂಕ 21-4-90 ರಂದು ಚಿತ್ರದುರ್ಗ ಜಿಲ್ಲೆ. ಹೊಸದುರ್ಗ ತಾಲ್ಲೂಕು ಮೈಲಾರಪುರದಲ್ಲಿ ಬಸವಜಯಂತಿ ಆಚರಣೆಯಲ್ಲಿ ಪಾಲ್ಗೊಂಡ ಭಕ್ತಸ್ತೋಮ ಸುಮಾರು ಮೂವತ್ತು ಸಹಸ್ರ. ಸಮಾರಂಭದಲ್ಲಿ ಹೊಸದುರ್ಗ ತಾಲ್ಲೂಕು ತಹಶೀಲ್ದಾರರಾದ ಶ್ರೀ ಅನಿಲ್‌ಕುಮಾರ್, ನಿವೃತ್ತ ಇಂಜಿನಿಯರಾದ ಕಬ್ಬಳದ ಶ್ರೀ ಕೆ. ವೀರಭದ್ರಪ್ಪನವರು, ದಾಸೇನಹಳ್ಳಿಯ ಶ್ರೀ ರೇಣುಕಾರಾಧ್ಯರು, ಶ್ರೀ ಹೆಚ್. ವಿ. ವೀರಭದ್ರಯ್ಯನವರು ಬಸವಣ್ಣನವರನ್ನು ಕುರಿತು ಉಪನ್ಯಾಸ ಮಾಡಿದರು,

ಪರಮ ಪೂಜ್ಯ ಶ್ರೀ ಶ್ರೀಗಳು ಆಶೀರ್ವಚನ ನೀಡುತ್ತ ಬಸವಣ್ಣನವರು ಒಂದು ಕುಲಕ್ಕೆ, ಒಂದು ದೇಶಕ್ಕೆ ಮೀಸಲಾದವರಲ್ಲ, ಸರ್ವಕಾಲಕ್ಕೆ, ಸರ್ವಜನಾಂಗಕ್ಕೆ ಇಡೀ ಮನುಕುಲಕ್ಕೆ ಆದರ್ಶ ಪ್ರಾಯರಾಗಿರುವಂಥವರು, ಪುರಾಣ ಪುರುಷರಲ್ಲ ಬಸವಣ್ಣ. ಚಾರಿತ್ರಿಕ ವ್ಯಕ್ತಿ ಪವಿತ್ರ ಸಂಕಲ್ಪದಿಂದ ಉದಾತ್ತ ಮನಸ್ಸಿನಿಂದ, ಎತ್ತರದ ಯೋಚನೆಗಳಿಂದ, ಪರಿಶುದ್ಧ ಚಾರಿತ್ರ್ಯದಿಂದ, ಅತ್ಯಂತ ವಿನಯ ಶೀಲತೆ-ಯಿಂದ ಬಾಳಿ ಬದುಕಿದವರು-ಲೋಕಕ್ಕಾಗಿ. ಇಹವನ್ನೇ ಪರವನ್ನಾಗಿ ಪರಿವರ್ತಿಸಿದ ಪರಮ ಪೂಜ್ಯರು ಎಂಬುದಾಗಿ ನುಡಿದರು.

ನಾಟಕ ಪ್ರಾರಂಭವಾಗುವುಕ್ಕೆ ಮೊದಲೇ ಜನ ಕಿಕ್ಕಿರಿದು, ಸ್ಥಳಾಭಾವದಿಂದ ಸಹಸ್ರಾರು ಜನ ನಿರಾಶೆಯಿಂದ ಹಿಂದಿರುಗಿದುದನ್ನು ಕಂಡ ಪರಮ ಪೂಜ್ಯರು ಶ್ರೀ ಶ್ರೀ ಗಳ ತುಂಬಾ ನೊಂದು ಕೊಳ್ಳ ಬೇಕಾಯಿತು. ಮೂವತ್ತು ಸಾವಿರ ಕಲಾಭಿ-ಮಾನಿಗಳು. ಗ್ರಾಮೀಣ ಮುಗ್ದರು ನಾಟಕದುದ್ದಕ್ಕೂ ಸ್ಪಂದಿಸಿದರು. ' ಒನ್ಸ್-ಮೋರ್'ಗಳ ಹಾವಳಿ ಧಾರಾಳವಾಗಿ ನೃತ್ಯ ಮಾಡಿತು. ಕಲಾವಿದರು ವಿವೇಕದಿಂದ ವರ್ತಿಸಿದರು. ನಿರ್ದೇಶಕರು ಜಾಣ್ಮೆಯಿಂದ ನಾಟಕಮುಂದೂಗಿಸಿದರು. ಬೆಳಗಾದಾಗ ಮೈಲಾರಲಿಂಗನ ಬೆಟ್ಟದತುದಿಗೆ ಬೆಳ್ಳಿಯ ಕಿರಣಗಳು ತಲುಪಿದಾಗ ನಾಟಕದಲ್ಲಿ ಬಸವಣ್ಣನ ಲಿಂಗೈಕ್ಯದೃಶ್ಯ ನಿಷ್ಪತ್ತಿಯೆಂಬ ಹಣ್ಣು ತೊಟ್ಟುಬಿಟ್ಟು, ಕಳಚಿ ಬೀಳುವಲ್ಲಿ ಕೂಡಲ ಸಂಗಮದೇವ ತನಗೆಬೇಕೆಂದೆತ್ತಿಕೊಂಡ, ಎಂಬ ವಚನ ಸುಶ್ರಾವ್ಯವಾಗಿ ಕೇಳಿ ಬರುತ್ತಿತ್ತು. ದಾರಿ ತುಂಬ ಜನ, ಲಾರಿತುಂಬಾ ಜನ, ಟ್ರಾಕ್ಟರ್ ತುಂಬಜನ, ಕಲಾವಿದರ ಬಸ್ಸಿಗೆ ದಾರಿಸಿಕ್ಕದಷ್ಟು ಜನ ಜನರ ಬಾಯಲ್ಲಿ ನಾಟಕದ ಮಾತುಗಳು.

ದಿನಾಂಕ 29-4-90 ರಂದು ಬಸವಯಾತ್ರೆ ಬೆಂಗಳೂರು ಜಿಲ್ಲೆ ಗೋಣೀಪುರ.
ದತ್ತ, ಉದ್ಘಾಟಿಸಿದ ಪುಣ್ಯ ಪೂಜ್ಯ ಮುಮ್ಮಡಿ ನಿರ್ವಾಣ ಸ್ವಾಮಿಗಳದು.
'ನುಡಿದರೆ ಮುತ್ತಿನ ಹಾರದಂತಿರಬೇಕು' ಎಂದು ನುಡಿಗಲಿಸಿದ ಬಸವಣ್ಣ ಎಂದ
ಶ್ರೀ ಶ್ರೀಗಳು ನುಡಿದರು.

ಸಾಮಾಜ ಸುಧಾರಕರ, ಸಾಹಿತ್ಯ ಕ್ರಾಂತಿ ದೀಪ, ಆಧ್ಯಾತ್ಮ ಭಾಸ್ಕರ.
ಎಂದು ನುಡಿದರು ಶ್ರೀ ರಾಜಶೇಖರಯ್ಯನವರು.

'ವಿಷಯಾಸಕ್ತನ ವಿರಕ್ತನೆಂದು ಕರೆದರೆ ವೇಷವನರಿಸಿದ ರಾಜನಿಗೆ ಕಪ್ಪವ
ಕೊಟ್ಟಂತಾಯಿತ್ತು' ಎನ್ನುತ್ತ ಶ್ರೀ ಗೊ. ರು. ಚನ್ನಬಸಪ್ಪನವರು, ಲೋಕಕ್ಕೆಬೇಕಾಗಿ
ಬದುಕ ಬೇಕಾದರೆ ನಮ್ಮ ಬಾಳು ಪವಿತ್ರವಾಗಿರಬೇಕೆಂಬುದನ್ನು ಬಸವಣ್ಣನವರಿಂದ,
ಸಿದ್ಧಗಂಗೆಯ ಶ್ರೀ ಶ್ರೀಗಳವರಿಂದ ನಾವಿಂದು ಕಲಿಯಬೇಕಾಗಿದೆ ಎಂದು ನುಡಿದರು.

ಜೋಳಿಗೆ ರುದ್ರಾಕ್ಷಿ ಮಾಲೆಯ ಪವಾಡದಿಂದ ಸಿದ್ಧಗಂಗೆಯನ್ನು ಮಹಾ-
ವಿಶ್ವವಿದ್ಯಾಲಯವನ್ನಾಗಿ ಮಾಡಿದರೆ ಪರಮ ಪರಮಪೂಜ್ಯ ಶ್ರೀ ಶ್ರೀ ಗಳು.
ಬಸವಾರ್ಪಿತ ವ್ಯಕ್ತಿತ್ವ ಅವರದು. ಮಹಾ ಚೇತನ ಸ್ವರೂಪಿಗಳು. ಬಸವಣ್ಣ
ಪರಿಚಯ ಮಾಡಿಕೊಳ್ಳ ಬಯಸುವವರು ಅವರ ವಚನಗಳನ್ನು ಅಧ್ಯಯನ
ಮಾಡಬೇಕು ನಡೆ-ನುಡಿಗಳೊಂದಾಗಿ ಬದುಕಿದ ಬಸವಣ್ಣ ಅಪರೂಪದ ಅಪೂರ್ವ
ಜೀವ, ಅವನಿಗೆ "ಅತ್ತೊಂದು ಕಾಲು, ಇತ್ತೊಂದು ಕಾಲು, ಇಹಪರವು ಒಂದೆ
ಕಾಲು" ಎಂಬಂಥ ಜೀವನ ಎಂದು ನುಡಿದರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ
ರಾದ ಪ್ರೊ|| ಜಿ. ಎಸ್. ಸಿದ್ದಲಿಂಗಯ್ಯನವರು.

ಮನುಷ್ಯ ಇಂದು ಸುಸಂಸ್ಕೃತನಾಗುತ್ತಿಲ್ಲ ರಾಕ್ಷಸ ನಾಗುತ್ತಿದ್ದಾನೆ, ಲೋಕ
ಕಂಟಕನಾಗುತ್ತಿದ್ದಾನೆ. ಮನುಷ್ಯ ಜಗತ್ತಿಗೆ ಕೊಡ ಬಹುದಾದ ಬಹುದೊಡ್ಡ
ಕಾಣಿಕೆಯೆಂದರೆ ಮನುಷ್ಯನಾಗಿ ಬಾಳುವುದು. ಅಂಥ ಕಲೆಯನ್ನು ಕಲಿಸಿಕೊಟ್ಟವರು
ಬಸವಣ್ಣನವರು. ಜೀವನ ಒಂದು ಸಂಕೀರ್ಣ ಕಲೆ. ಲೋಕಕ್ಕೆ ಬೇಕಾಗಿ ಬದುಕು
ಮಾರ್ಗ ಅವನದಾಗಬೇಕು. ಆದೂಲೇಸೆನಿಸಿಕೊಂಡು ಬದುಕ ಬೇಕು. ಹತ್ತು ಜ
ಒಪ್ಪುವಂತಹ ಬಾಳು ಆದರ್ಶವೆನಿಸುತ್ತದೆ. ಇಂದು ಉಪದೇಶ ಎಲ್ಲೆಡೆ ನಡೆದಿದೆ
ಆದರೆ ತತ್ವಜ್ಞಾನ ಹಸಿದ ಹೊಟ್ಟೆಗಳಿಗಲ್ಲ. ಸಂತೃಪ್ತ ಜನಾಂಗ ನಿರ್ಮಾಣವಾಗಬೇ
ಆಗ ತತ್ವಜ್ಞಾನಕ್ಕೆ ಅವಕಾಶ ಒದಗೀತು ಎಂದು ಆಶೀರ್ವಚನ ನೀಡಿದರು. ಪರಮ
ಪೂಜ್ಯ ಶ್ರೀ ಶ್ರೀಗಳು ಅಧ್ಯಕ್ಷ ಪೀಠದಿಂದ.

ಜಗಜ್ಯೋತಿ ನಾಟಕ ನೋಡಿ ನಲಿದ ಗ್ರಾಮೀಣ ಬಂಧುಗಳು 'ಪಾವನ
ಪ್ರಭು ಬಸವೇಶ' ಎಂಬ ನಾಟಕದ ಹಾಡನ್ನು ಗುನುಗುನಿಸುತ್ತಾ ಹೋಗುತ್ತಿದ್ದ
ಮತ್ತೆ ಬರೆಯುತ್ತೇನೆ.



ಸಿದ್ಧಗಂಗಾ

# ಶ್ರೀ ಶ್ರೀಗಳವರ ವರ್ಧಂತಿ

ಶ್ರೀ ಮಠದ ಅಧ್ಯಕ್ಷರಾದ ಪರಮ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರಸ್ವಾಮಿಗಳವರಿಗೆ 1-4-90ಕ್ಕೆ ಎಂಬತ್ತೆರಡು ವರ್ಷಗಳು ತುಂಬಿದುವು. ಶ್ರೀಗಳು ಎಂಬತ್ಮೂರಕ್ಕೆ ಪಾದಾರ್ಪಣೆ ಮಾಡಿದ ಸವಿಸ್ಮರಣೆಗಾಗಿ ನಾಡಿನ ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು ಶ್ರೀಮಠದ ವಿವಿಧ ಶಿಕ್ಷಣ ಸಂಸ್ಥೆಗಳ ಉದ್ಯೋಗಿಗಳು ದಿನಾಂಕ 13-4-90 ರಂದು ವೈಭವೋಪೇತವಾದ ವರ್ಧಂತಿಯನ್ನಾಚರಿಸಿದ್ದು ಪೂಜ್ಯಪಾದರ ಸೇವಾ ಹಿರಿಮೆಗೆ ಎತ್ತಿದ ಶಿವಧ್ವಜವಾಗಿತ್ತು. ರಾಷ್ಟ್ರದ ಹಿರಿಯನಾಯಕರಾದ ಮಾಜಿ ಮುಖ್ಯ ಮಂತ್ರಿಗಳಾದ ಸಿದ್ದವನಹಳ್ಳಿ, ಶ್ರೀ ನಿಜಲಿಂಗಪ್ಪನವರು ಭಾಗವಹಿಸಿದ್ದಂತೂ ಸಮಾರಂಭಕ್ಕೆ ವಿಶೇಷ ಶೋಭೆಯನ್ನು ತಂದಿತು. ಮುಖ್ಯ ಮಂತ್ರಿಗಳಾದ ಸನ್ಮಾನ್ಯ ಶ್ರೀ ವೀರೇಂದ್ರಪಾಟೀಲರು ಬಂದದ್ದಂತೂ ಭಕ್ತಾದಿಗಳಿಗೆ ಸಂತೋಷವನ್ನುಂಟು ಮಾಡಿತು. ಮಾನ್ಯ ಸಚಿವರಾದ ಶ್ರೀ ರಾಜಶೇಖರಮೂರ್ತಿಯವರು, ಶ್ರೀ ಪುಟ್ಟಸ್ವಾಮಿಗೌಡರು, ಶ್ರೀ ಅಜೀಜ್‌ಸೇಟರವರು ಪಾಲ್ಗೊಂಡು ಸಂತೋಷವನ್ನು ಇಮ್ಮಡಿಸಿದರು. ಅಧ್ಯಕ್ಷತೆಯನ್ನು ವಹಿಸಿ ಮುತ್ತಿನಂಥ ಮೌಲಿಕವಾದ ಆಶೀರ್ವಚನ ನೀಡಿದ ಇಲಕಲ್ಲಿನ ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನದ ಪರಮ ಪೂಜ್ಯರಾದ ಶ್ರೀ ಶ್ರೀ ಮಹಾಂತಸ್ವಾಮಿಗಳವರ ದರ್ಶನಾಶೀರ್ವಾದದಿಂದ ಸಮಸ್ತ ಭಕ್ತವೃಂದ ಪುನೀತವಾಯಿತು ಸಮಾರಂಭದಲ್ಲಿ ಸನ್ಮಾನಿತರಾದ ಶರಣಸಾಹಿತ್ಯ ಭಾಸ್ಕರ ಡಾ|| ಎಚ್. ತಿಪ್ಪೇರುದ್ರಸ್ವಾಮಿಗಳು, ಗುಲ್ಬರ್ಗ ವಿಶ್ವವಿದ್ಯಾನಿಲಯದ ಕುಲಪತಿಗಳಾದ ಡಾ|| ಎನ್. ರುದ್ರಯ್ಯನವರು, ಮಾಡಿದ ಉಪನ್ಯಾಸಗಳಂತೂ ಪರಮ ಪೂಜ್ಯ ಶ್ರೀ ಶ್ರೀಗಳವರ ತಪೋಜೀವನಕ್ಕೆತ್ತಿದ ಭಕ್ತಿ ಜ್ಯೋತಿಗಳಾದುವು. ಶರಣ ಬಂಧು ಕೊಳ್ಳೆಗಾಲದ ಶ್ರೀ ಪಿ. ಬಸವಣ್ಣನವರಿಂದ ರಚಿತವಾದ "ಶ್ರೀ ಶಿವಕುಮಾರಚರಿತಂ" ವಿಶಿಷ್ಟಕೃತಿ ಬಿಡುಗಡೆಯಾದದ್ದು ಸಮಾರಂಭದ ಚಿರಸ್ಮೃತಿಗೆ ಭಕ್ತಿದರ್ಪಣವಾಯಿತು. ಶ್ರೀ ಮಠದ ಉತ್ತರಾಧಿಕಾರಿಗಳಾದ ಪರಮ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರ ಆಶೀರ್ವಚನದ ನುಡಿಗಳಿಂದ ಭಕ್ತಾದಿಗಳಿಗೆಲ್ಲರಿಗೆ ಆತ್ಮವಿಶ್ವಾಸ ಮೂಡಿ ಬಂದಿತು. ಪರಮ ಪೂಜ್ಯರ ಆಶೀರ್ವಾದವಾಣಿ ಸಮಸ್ತರಿಗೂ ಜೀವನದ ಗುರಿ, ಉದ್ದೇಶಗಳತ್ತ ಗಮನ ಹರಿಸುವಂತೆ ಬೋಧ ಪ್ರದವಾಯಿತು.

ಸಮಾರಂಭದ ಎಲ್ಲ ಕಾರ್ಯಕ್ರಮಗಳ ಯಶಸ್ಸಿಗೆ ಕಾರಣರಾದವರಿಗೆ "ಸಿದ್ಧಗಂಗಾ" ವಂದನೆಗಳನ್ನು ಅರ್ಪಿಸಲು ಸಂತೋಷಿಸುತ್ತದೆ.

ಏಪ್ರಿಲ್-1990

## ಪರಮ ಪೂಜ್ಯ ಶ್ರೀ ಶ್ರೀಗಳವರ ಏಪ್ರಿಲ್ ತಿಂಗಳ ಕಾರ್ಯಕ್ರಮಗಳು

1-4-90 ಬೆಂಗಳೂರು ಜೆ. ಪಿ. ನಗರದ ಶ್ರೀ ದಯಾನಂದ ಅವರ ಮನೆಯಲ್ಲಿ ಪೂಜೆ.

2-4-90 ರಾಮೇನಹಳ್ಳಿ ಮಠದಲ್ಲಿ ಪೂಜೆ.

3-4-90 ಒಳಕಲ್ಲು ಶ್ರೀ ಮಲ್ಲೇಶ್ವರಯ್ಯನವರ ಮನೆಯಲ್ಲಿ ಪೂಜೆ-ಬೆಂಗಳೂರಿನಲ್ಲಿ ಕಾರ್ಯಕ್ರಮ, ನೆಲಮಂಗಲ ತಾ॥ ಭಾರತೀಪುರದಲ್ಲಿ ಕಾರ್ಯಕ್ರಮ

4-4-90 ಕುಣಿಗಲ್ ತಾಲ್ಲೂಕು, ಎಡೆಯೂರಿನಲ್ಲಿ ಕಾರ್ಯಕ್ರಮ.
ಅರದೇಶನಹಳ್ಳಿ ಶ್ರೀ ಹನುಮಂತಗೌಡರು ಏರ್ಪಡಿಸಿದ್ದ ಕಾರ್ಯಕ್ರಮ.

5-4-90 ಬೆಂಗಳೂರು ರಾಜಾಜಿನಗರ, ಜಿ ಎಸ್. ಪ್ರಭುಲಿಂಗಯ್ಯನವರ ಮನೆಯಲ್ಲಿ -ಪೂಜೆ--ವೀರಭದ್ರಸ್ವಾಮಿ ಶಾಲೆಯ ವಾರ್ಷಿಕೋತ್ಸವ.

6-4-90 ಶೀನಪ್ಪನಹಳ್ಳಿಯಲ್ಲಿ ಪೂಜೆ-
ಮಂಡ್ಯ ತಾ॥ ಕನ್ನಟ್ಟಿ ಬಸವೇಶ್ವರ ಕಲ್ಯಾಣಮಂಟಪದ ಶಂಕುಸ್ಥಾಪನೆ.

7-4-90 ಮಡವಾಡಿ ಮತ್ತು ಬೆಳಕವಾಡಿಯಲ್ಲಿ ಆರಾಧನಾ ಮತ್ತು ಪೂಜೆ.

8-4-90 ಮಾಗಡಿ ತಾ॥ ಮೋಟಗಾನಹಳ್ಳಿಯಲ್ಲಿ ಬಸವಜಯಂತಿ ಕಾರ್ಯಕ್ರಮ

9-4-90 ಚಾಮರಾಜಪೇಟೆ ಶ್ರೀ ಬಿ. ಆರ್. ರೇಣುಕಾಚಿವರ ಮನೆಯಲ್ಲಿ ಪೂಜೆ.
ಬೆಂಗಳೂರು ರಾಜಾಜಿನಗರ, ಎನ್. ವಿ ರೇವಣ್ಣನವರ ಮನೆಯಲ್ಲಿ ಪೂಜೆ.
ದೊಡ್ಡಬಳ್ಳಾಪುರ ತಾ॥ ಹುಲುಕುಂಟೆಯಲ್ಲಿ ಪೂಜಾ. ಕಾರ್ಯಕ್ರಮ

10-4-90 ದೊಡ್ಡಗಂಗವಾಡಿಯಲ್ಲಿ ಗ್ರಾಮಾಂತರ ಬಸವಜಯಂತಿ ಕಾರ್ಯಕ್ರಮ

11-4-90 ಬೆಂಗಳೂರು ಗಣೇಶ ಟ್ರಾವಲ್ಸ್ ಅವರ ಮನೆಯಲ್ಲಿ ಪೂಜೆ.
ತುಮಕೂರಿನಲ್ಲಿ ಕಾರ್ಯಕ್ರಮ.

13-4-90 ಶ್ರೀ ಮಠದಲ್ಲಿ ಶ್ರೀ ಶ್ರೀಗಳವರ 83 ನೇ ಜನ್ಮದಿನೋತ್ಸವ ಕಾರ್ಯಕ್ರಮದಲ್ಲಿ

14-4-90 ತುಮಕೂರಿನಲ್ಲಿ, ಕೆ. ಶಂಕರಯ್ಯನವರ ಮನೆಯಲ್ಲಿ ಪೂಜೆ.
ಬೆಟ್ಟಹಳ್ಳಿಮಠದಲ್ಲಿ ಪೂಜೆ.

15-4-90 ಚಿತ್ರದುರ್ಗದಲ್ಲಿ ಆಯಿಲ್‌ಮಿಲ್ ಪ್ರಾರಂಭೋತ್ಸವ

16-4-90 ಗುಂಡಿಗೆರೆ ಶ್ರೀಗುರು ಚನ್ನಬಸಪ್ಪನವರ ಮನೆಯಲ್ಲಿ ಪೂಜೆ
ಶೂಲದಯ್ಯನಪಾಳ್ಯದಲ್ಲಿ ಪೂಜೆ

17-4-90 ಚಿಕ್ಕ ಬೆಳವಂಗಲದಲ್ಲಿ ಶ್ರೀ ಸಾವಂದಪ್ಪನವರ ಮನೆಯಲ್ಲಿ ಪೂಜೆ.

18-4-90 ತಳವಾರನಹಳ್ಳಿ ಶ್ರೀ ನಂಜಪ್ಪನವರ ಮನೆಯಲ್ಲಿ ಪೂಜೆ. ಆರೇಹಳ್ಳಿಯಲ್ಲಿ ಶ್ರೀ ಎ. ನಂಜಪ್ಪನವರ ಆರಾಧನೆ ಮತ್ತು ಪೂಜೆ. ಜಡಗೇನಹಳ್ಳಿ ಶ್ರೀ ದೊಡ್ಡವೀರಣ್ಣನವರ ಮನೆಯಲ್ಲಿ ಪೂಜೆ.

19-4-90 ಸಕಲೇಶಪುರದಲ್ಲಿ ಬಸವಜಯಂತಿ. ಸಾಮೂಹಿಕ ವಿವಾಹ ಕಾರ್ಯಕ್ರಮ

20-4-90 ಹಾಸನದ ತಣ್ಣೀರಹಳ್ಳಿ ಮಠದ ಕಾರ್ಯಕ್ರಮ

21-4-90 ಹೊಸದುರ್ಗ ತಾ॥ ಶ್ರೀರಾಂಪುರ ಹೋ॥ ಮೈಲಾರಪುರದಲ್ಲಿ ಬಸವಜಯಂತಿ ಕಾರ್ಯಕ್ರಮ.

22-4-90 ಸಿದ್ಧಗಂಗಾ ವಿದ್ಯಾಸಂಸ್ಥೆಯ ಜನರಲ್ ಬಾಡಿ ಮೀಟಿಂಗ್, ದೊಡ್ಡಬಳ್ಳಾಪುರ ತಾ॥ ಹುಲಿಕುಂಟೆ ಬಳಿ ಕೋಡಿಹೊಸಹಳ್ಳಿಯಲ್ಲಿ ಪೂಜೆ.

23-4-90 ಬೆಂಗಳೂರು ಹನುಮಂತನಗರ ಬಸಪ್ಪ ಲೇಔಟ್‌ನಲ್ಲಿ ಶ್ರೀ ವಿ. ನಾಗರಾಜ್ ಅವರ ಮನೆಯಲ್ಲಿ ಪೂಜೆ.

24-4-90 ನೀಲಗಿರಿಯ ಊಟಿಯಲ್ಲಿ, ಗುರುಬಸವ ಶಾಂತಿನಿಕೇತನದಲ್ಲಿ ಕಾರ್ಯಕ್ರಮ ಮತ್ತು ಪೂಜೆ.

25-4-90 ಶ್ರೀ ಕೆ. ಎಸ್. ಶಿವನಂಜಯ್ಯನವರ ಮನೆಯಲ್ಲಿ ಪೂಜೆ

26-4-90 ತುಮಕೂರು ಕೋರಿ ಶ್ರೀ ಸದಾಶಿವಯ್ಯನವರ ಮನೆಯಲ್ಲಿ ಪೂಜೆ.

27-4-90 ನೆಲಮಂಗಲದ ಅಡ್ವೋಕೇಟ್ ಶ್ರೀ ಚನ್ನಬಸವಯ್ಯನವರ ಮನೆಯಲ್ಲಿ ಪೂಜೆ. ಬೆಂಗಳೂರು ಮಹಾಲಕ್ಷ್ಮಿಲೇಔಟ್, ಬಂಡೇಕಾವಲುಬಳಿ ಶ್ರೀ ಮಹಾಲಿಂಗಯ್ಯನವರ ಮನೆಯಲ್ಲಿ ಪೂಜೆ.
ಚಳ್ಳಕೆರೆಯಲ್ಲಿ ಕೈಗಾರಿಕಾ ಘಟಕದ ಪ್ರಾರಂಭೋತ್ಸವದ ಕಾರ್ಯಕ್ರಮ.

28-4-90 ತುಮಕೂರ ಬಟವಾಡೆಬಳಿ. ದಲಿತ ಸಮಾಜದ ಸಾಮೂಹಿಕ ಸರಳ ವಿವಾಹ ಕಾರ್ಯಕ್ರಮ. - ಹುಲಿಕಲ್ಲುನಲ್ಲಿ ಕಾರ್ಯಕ್ರಮ. ಶಿವಮೊಗ್ಗದಲ್ಲಿ -ಬಸವಜಯಂತಿ ಕಾರ್ಯಕ್ರಮ.

29-4-90 ಬೆಂಗಳೂರು ಯಶವಂತಪುರ ಗೋಕುಲ ಬಡಾವಣೆ, ಶ್ರೀ ಮರಿಗಂಗಯ್ಯನವರ ಮನೆಯಲ್ಲಿ ಪೂಜೆ.–ಬೆಂಗಳೂರು ಕೆಂಗೇರಿ ಹೋಬಳಿ ಗೋಣಿಪುರದಲ್ಲಿ ಬಸವಜಯಂತಿ ಕಾರ್ಯಕ್ರಮ. ಬೆಂಗಳೂರು ಅತ್ತಿಗುಪ್ಪೆ ಚಂದ್ರಲೇಔಟ್, ಶ್ರೀ ನಾಗರಾಜಸ್ವಾಮಿ ಅವರ ಮನೆಯಲ್ಲಿ ಪೂಜೆ.

30-4-90 ಬಳ್ಳಾರಿ ತಾ॥ ಹರಪನಹಳ್ಳಿಯ ಕಾರ್ಯಕ್ರಮ. - ಸಂಜೆ ಶ್ರೀಮಠದಲ್ಲಿ ವಿದ್ಯಾಸಂಸ್ಥೆಗಳ ಮೀಟಿಂಗ್.